ನೆರವಿನ ಗರಿಷ್ಠ ಮಿತಿ

| | ವಿ.ನಿ. | ನಬಕಾ |
|---|---|---|
| ಕೈಗಾರಿಕೆ | ರೂ. 35,000 | ರೂ. 5,000 |
| ಸೇವೆಗಳು | ರೂ. 25,000 | |
| ವ್ಯಾಪಾರ | ರೂ. 15,000 | |

ಹೀಗಾಗಿ ಮುದ್ರಣ ಮುಂತಾದ ಕೈಗಾರಿಕೆಗಳಾಗಲಿ, ಜೆರಾಕ್ಸ್ ಇತ್ಯಾದಿ ಸೇವಾ ಚಟುವಟಿಕೆಗಳಾಗಲಿ ನೆರವಿನ ಮಿತಿಯಿಂದಾಗಿ ಈ ಹೊಸ ಯೋಜನೆಯ ವ್ಯಾಪ್ತಿಗೆ ಬರಲಾರವು.

ವಿ. ನಿ. ಯೋಜನೆ ಗ್ರಾಮೀಣ ಪ್ರದೇಶಗಳಿಗೂ ಅನ್ವಯವಾಗುವುದು; ಆದರೆ ಹೊಸ ಯೋಜನೆ ಗ್ರಾಮೀಣ ಪ್ರದೇಶಗಳಿಗೆ ಕಾಲಿಡುವಂತಿಲ್ಲ. ಮಹಾನಗರಗಳಿಗೆ ಹೊಸ ಯೋಜನೆ ಅನ್ವಯವಾಗುತ್ತದೆಯೇ ವಿನಾ ಮೊದಲಿನದಲ್ಲ. ಅತಿ ವ್ಯಾಪ್ತಿಯುಂಟಾಗುವುದು— ಎಂದರೆ, ಎರಡೂ ಯೋಜನೆಗಳು ಒಟ್ಟಾಗಿ ಜಾರಿಯಲ್ಲಿರಲು ಸಾಧ್ಯವಾಗುವುದು – ಪಟ್ಟಣ ಮತ್ತು ಅರೆಪಟ್ಟಣ ಪ್ರದೇಶಗಳಲ್ಲಿ. ಯೋಜನೆಯ ಉಪಯುಕ್ತತೆಯನ್ನು ಮನಗಂಡಾಗ ಸ್ವಲ್ಪಮಟ್ಟಿನ ಈ ಅತಿ ವ್ಯಾಪ್ತಿಯ ದೋಷ ಗೌಣವಾಗುತ್ತದೆ. ಹೊಸ ಯೋಜನೆಯಲ್ಲಿ ವಯೋಮಿತಿ, ಶೈಕ್ಷಣಿಕ ಅರ್ಹತೆಯ ನಿಬಂಧನೆಗಳಿಲ್ಲ. ಮೊದಲಿನ ಯೋಜನೆಯಲ್ಲಿ ಎಸ್‌ಎಸ್‌ಎಲ್‌ಸಿ ತೇರ್ಗಡೆಯಾದ 18ರಿಂದ 35 ವಯಸ್ಸಿನ ಯುವಕ/ಯುವತಿಯರು ಮಾತ್ರ ಅರ್ಹತೆ ಪಡೆಯುತ್ತಾರೆ. ಮೊದಲ ಯೋಜನೆಯಲ್ಲಿ ಸಾಲಗಾರನನ್ನು ಗುರುತಿಸುವುದು ಜಿಲ್ಲಾ ಕೈಗಾರಿಕಾ ಕೇಂದ್ರವಾದರೆ, ಈಗಿನ ಯೋಜನೆಯಲ್ಲಿ ಪಡಿತರ ಕಾರ್ಡುಗಳು ಸಾಲಗಾರನನ್ನು ಗುರುತಿಸಲು ಬ್ಯಾಂಕರನಿಗೆ ನೆರವಾಗುತ್ತವೆ.

(ii) ಈ ಯೋಜನೆ ಹಿಂದಿನ ಯೋಜನೆಗಳಿಗಿಂತ ಭಿನ್ನವಾದ್ದೆಂಬುದು ನಿಜವಾದರೂ, ಬ್ಯಾಂಕಿನ ಮಾಮೂಲಿ ಯೋಜನೆಗಳಡಿ ಈ ಯೋಜನೆಯಲ್ಲಿ ಬರುವ ಊದುಕಡ್ಡಿ ತಯಾರಕ, ಬಡಗಿ, ಸೈಕಲ್, ರಿಕ್ಷಾವಾಲ, ಸಿಂಪಿಗ ಮುಂತಾದ ಎಲ್ಲರಿಗೂ ಇಂಥ ಸಾಲಗಳನ್ನು ನೀಡಲು ಸಾಧ್ಯವಾಗುತ್ತಿತ್ತು. ಆದರೆ ಕಡಮೆ ಬಡ್ಡಿಯ ದರ ಮತ್ತು ಸಹಾಯಧನದ ಲಾಭ ಸಾಲಗಾರನಿಗೆ ದೊರೆಯುತ್ತಿರಲಿಲ್ಲ. ಈ ದೃಷ್ಟಿಯಿಂದ ಯೋಜನೆ ಬ್ಯಾಂಕುಗಳಿಗೆ ಉಂಟುಮಾಡುವ ಅಧಿಕ ಒತ್ತಡವನ್ನು ಲೆಕ್ಕಿಸಿಯೂ ಸ್ವಾಗತಾರ್ಹವೇ ಎನ್ನಬಹುದು.

(iii) ಈ ಯೋಜನೆಯ ವ್ಯಾಪ್ತಿಗೆ ಬರುವ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದರಿಂದ ಬರುವ ಆದಾಯದಲ್ಲಿ ಒಂದು ಕುಟುಂಬ ಜೀವನ ನಡೆಸಲು ಸಾಧ್ಯ ಎಂಬುದು ಅನುಭವಕ್ಕೆ ಬಂದಿರುವ ಸಂಗತಿ. ಇಂಥವೇ ಉದ್ಯೋಗ ನಡೆಸುತ್ತಿರುವ ಅನೇಕರೊಡನೆ ಸ್ಪರ್ಧಿಸಿ ನಮ್ಮ ಹೊಸ ಯೋಜನೆಯ ಫಲಾನುಭವಿ ಯಶಸ್ವಿಯಾಗಬಲ್ಲನೆ? ಅವನಿಗೆ ಸಂಬಂಧಿಸಿದ ಉದ್ಯಮ ನಡೆಸುವ ಕೌಶಲ, ಸಾಮರ್ಥ್ಯ ಕರಗತವಾಗಿದೆಯೆ? ಇದನ್ನು ನಿರ್ಧರಿಸಬೇಕಾದ್ದು ಬ್ಯಾಂಕರನ ಹೊಣೆ. 'ಅಭಿರುಚಿ ಪೂರ್ವಾನುಭವಗಳನ್ನು ಗಮನಿಸಿಯೇ ಫಲಾನುಭವಿಗಳನ್ನು ಆಯ್ಕೆಮಾಡಿ' ಎಂದು ಮೊದಲೇ ಬ್ಯಾಂಕುಗಳಿಗೆ ಹೇಳಲಾಗಿದೆಯಷ್ಟೆ?

(iv) ಈ ಒಂದು ವರ್ಷದಲ್ಲಿ ಪ್ರತಿ 500 ಜನರಲ್ಲಿ ಒಬ್ಬರಿಗೆ ಸಾಲ ಎನ್ನುವುದಕ್ಕೆ ಯಾವ ಆಧಾರವಿದೆಯೋ ತಿಳಿಯುವುದಿಲ್ಲವಾದರೂ ತಕ್ಕಷ್ಟು ಸಮಂಜಸವಾದ ಮಿತಿ ಎನ್ನಿಸುತ್ತದೆ. (1 ಲಕ್ಷ ಜನಸಂಖ್ಯೆಯಿರುವ ಪಟ್ಟಣದಲ್ಲಿ 200 ಫಲಾನುಭವಿಗಳನ್ನು ಗುರುತಿಸಬೇಕಾಗುತ್ತದೆ.) ಸರಕಾರ ನೀಡಬೇಕಾದ ಸಹಾಯಧನ ಈ ಮಿತಿಯನ್ನು ನಿರ್ಧರಿಸಿರಬಹುದೆಂದು ಊಹಿಸಲು ಅಡ್ಡಿಯಿಲ್ಲ. ಅಭಿವೃದ್ಧಿಶೀಲವಾಗಿರುವ ನಮ್ಮ ದೇಶದಲ್ಲಿ ವಿರಳವಾಗಿರುವ ಸಂಪನ್ಮೂಲಗಳನ್ನು ಜಾಗರೂಕತೆಯಿಂದ ಬಳಸುವ ಅಗತ್ಯವಿದ್ದು ಹಣಕಾಸು ಮಂತ್ರಾಲಯ ಈ ಹೊಸ ಯೋಜನೆಯನ್ನು ಪ್ರಾಯೋಗಿಕವಾಗಿ ಜಾರಿಗೆ ತರಲು ಪ್ರಯತ್ನಿಸಿರುವುದು ಮೆಚ್ಚುಗೆಗೆ ಅರ್ಹ.

(v) ಗ್ರಾಮೀಣ ಪ್ರದೇಶದ ಬಡ ಜನರಿಗೆ 3 ವರ್ಷಗಳ ಹಿಂದೆ ಲಭ್ಯವಾದ ಉದರಿ ಸೌಲಭ್ಯಕ್ಕೆ ಸಂವಾದಿಯಾಗಿ ನಗರ/ಪಟ್ಟಣ ಪ್ರದೇಶದ ಬಡ ಜನರಿಗೆ ಈ ಯೋಜನೆಯ ಸೌಲಭ್ಯ ನೀಡುವ ಆಶಯ ತರ್ಕಸಮ್ಮತವಾಗಿದೆ.

## ಉತ್ತಮಾಂಶಗಳು

ಪಟ್ಟಣ ಪ್ರದೇಶದಲ್ಲಿಯ ಬಡವರ ಸ್ಥಿತಿ ದಾರುಣ. ನಿಲ್ಲಲು ನೆಲೆಯಿಲ್ಲದೆ, ಜೀವನೋಪಾಯಕ್ಕೆ ಯಾವುದೇ ಉದ್ಯೋಗವೂ ಇಲ್ಲದೆ ತೊಳಲುವವರ ಸಂಖ್ಯೆ ಕಡಮೆಯೇನಿಲ್ಲ. ಗ್ರಾಮೀಣ ಪ್ರದೇಶದ ಬಡಜನರಂತಲ್ಲದೆ ಸ್ಥಳದಿಂದ ಸ್ಥಳಕ್ಕೆ ಅಲೆದಾಡಬೇಕಾದ ಇಂಥವರಿಗೆ ನೆರವು ನೀಡುವುದೂ ಕಷ್ಟ. ಈ ಹಿನ್ನೆಲೆಯಲ್ಲಿ ಕೇಂದ್ರ ಸರಕಾರ ಪಟ್ಟಣ ಪ್ರದೇಶದ ಬಡಜನರಿಗಾಗಿ ಸಹಾಯಧನ ಸಹಿತವಾದ ಹೊಸ ಯೋಜನೆಯೊಂದನ್ನು ರೂಪಿಸಿರುವುದು ಯುಕ್ತವಾಗಿಯೇ ಇದೆ. ಇದರಲ್ಲಿ ಸ್ವಲ್ಪ ರಾಜಕೀಯ ದೃಷ್ಟಿಯೂ ಇರಬಹುದಾದರೂ ಒಟ್ಟಾರೆ ಇದೊಂದು ಒಳ್ಳೆಯ ಯೋಜನೆ ಎಂದು ಒಪ್ಪಬೇಕು.

ಬ್ಯಾಂಕುಗಳ ಹೊಣೆಗಾರಿಕೆಯನ್ನು ಗಮನದಲ್ಲಿರಿಸಿ ಆಲೋಚನೆ ಹರಿಸಿದರೆ ಹೊಸ ಯೋಜನೆಯಲ್ಲಿನ ಮತ್ತೆ ಕೆಲವು ಉತ್ತಮಾಂಶಗಳು ಕಾಣಬಹುದು :

1 ನೆರವಿನ ಗರಿಷ್ಠ ಮಿತಿ ಕಡಮೆಯಿರುವುದು,
2 ಸಾಲಗಳ ಸಂಖ್ಯೆ ನಿರ್ದಿಷ್ಟವಾಗಿರುವುದು,
3 ಸಾಲ ಮಂಜೂರಾತಿಗೆ ಸಮಯವನ್ನು ಮಾಮೂಲಿನ 14 ದಿನಗಳಿಗೆ ಬದಲು 30 ದಿನಗಳಿಗೆ ಏರಿಸಿರುವುದರ ಮೂಲಕ ಮಂಜೂರಿಗೆ ಮೊದಲಿನ ಭೇಟಿಗೆ (Pre-Sanction visit) ಅನುವು ಮಾಡಿಕೊಟ್ಟಿರುವುದು.
4 ವಿದ್ಯಾವಂತ ನಿರುದ್ಯೋಗಿ ಯುವಜನರ ಸ್ವೋದ್ಯೋಗ ಯೋಜನೆಯಲ್ಲಿ ಫಲಾನುಭವಿಗಳನ್ನು ಗುರುತಿಸುವಲ್ಲಿ ಮತ್ತು ಯಂತ್ರ ಖರೀದಿಯೇ ಮೊದಲಾದ ಇತರ ವಿಷಯಗಳಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ ವಿಶೇಷ ಪಾತ್ರ ವಹಿಸುವುದಿತ್ತು. ಆದರೆ ಈಗಿನ ಯೋಜನೆಯ ಅನುಷ್ಠಾನದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ ಅಥವಾ ಇನ್ನಾವುದೇ ಅಭಿಕರಣ ಭಾಗವಹಿಸುವುದಿಲ್ಲ. ಹೀಗಾಗಿ ಬ್ಯಾಂಕರುಗಳಿಗೆ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯ ದೊರೆಯಬಹುದೆಂದು ಆಶಿಸಲು ಅವಕಾಶವಿದೆ.

## ಪ್ರಚಾರದ ಪರಿಣಾಮ

ಯೋಜನೆಯ ಉತ್ತಮಾಂಶಗಳನ್ನು ಗಮನಿಸಿದಾಗ ಕೇಂದ್ರ ಸರಕಾರದ ಹಣಕಾಸು ಮಂತ್ರಾಲಯ ಎಚ್ಚರದಿಂದ ಯೋಜನೆ ತಯಾರಿಸಿದೆ ಎಂಬ ಭಾವನೆ ಬರಬಹುದು. ಆದರೆ ಈ ಸಣ್ಣ ಯೋಜನೆಗೆ ದೊರಕಿರುವ ಅಬ್ಬರದ ಪ್ರಚಾರ, ಕಾರ್ಯವಿಧಾನದಲ್ಲಿ ಉಂಟುಮಾಡಿರುವ ಗೊಂದಲ ಹಾಗೂ ಈ ಯೋಜನೆಗೆ ದೊರೆತ ಸಾರ್ವಜನಿಕ ಪ್ರತಿಕ್ರಿಯೆಗಳನ್ನು ಗಮನಿಸಿದಾಗ ಈ ಭಾವನೆ ಭ್ರಮೆಯೂ ಆಗಿರಬಹುದೆಂಬ ಅರಿವು ಮೂಡುತ್ತದೆ.

ಆಗಸ್ಟ್ ತಿಂಗಳ ಆರಂಭದಿಂದಲೂ ಪ್ರಚಾರ ಪಡೆಯುತ್ತಿರುವ ಈ ಯೋಜನೆಯ ರೂಪರೇಷೆಗಳು ಲಿಖಿತರೂಪದಲ್ಲಿ ಬ್ಯಾಂಕರರ ಕೈಸೇರುವ ವೇಳೆಗೆ ಒಂದು ತಿಂಗಳು ಕಳೆದುಹೋಗಿತ್ತು. ಆ ವೇಳೆಗಾಗಲೇ ಎಲ್ಲ ಪತ್ರಿಕೆಗಳಲ್ಲೂ ಯೋಜನೆಯ ವಿವರಗಳು ಮೂಡಿ, ಸಾಲಕ್ಕಾಗಿ ಬ್ಯಾಂಕುಗಳಿಗೆ ಅಲೆದವರೆಷ್ಟೋ! ಸೀಮಿತ ಸಂಖ್ಯೆಯ ಸಾಲಗಳನ್ನು ನೀಡಬೇಕಾಗಿರುವ ಈ ಯೋಜನೆಗೆ ಇಷ್ಟೊಂದು ಪ್ರಚಾರ, ಬ್ಯಾಂಕರರ ಸಮಿತಿ, ಸಂಚಾಲಕತ್ವ ವಹಿಸುವ ಬ್ಯಾಂಕ್, ಪ್ರತಿಕೇಂದ್ರದಲ್ಲೂ ಸಹಸ್ರಾರು ಅರ್ಜಿಗಳ ಸ್ವೀಕಾರ—ಇವುಗಳ ಅಗತ್ಯವಾದರೂ ಏನಿತ್ತು? 1987ರ ಮಾರ್ಚ್ ವರೆಗಿನ ಸಮಯದೊಳಗೆ ಗುರಿಮುಟ್ಟುವಷ್ಟು ಅಭ್ಯರ್ಥಿಗಳು ದೊರೆಯದೆ ಹೋಗುತ್ತಿದ್ದರೆಂದೇ ?

ಹೀಗೆ ಪ್ರಚಾರದಿಂದ ಜನರನ್ನು ಒಮ್ಮೆಲೇ ಕೆರಳಿಸಿದುದರ ಪರಿಣಾಮ ? ದೇಶದ ವಿವಿಧ ನಗರಗಳಲ್ಲಿ ಸಾಲದ ಅರ್ಜಿಗಳು ಸಿಕ್ಕದೆ ಹೋದ ಹತಾಶೆಯಲ್ಲಿ ಬ್ಯಾಂಕುಗಳ ಮುಂದೆ ಹಿಂಸೆಗೆ ಇಳಿದಿದ್ದ ಉದ್ರಿಕ್ತ ಗುಂಪುಗಳನ್ನು ಚದುರಿಸಲು ಪೋಲೀಸರು ಲಾಠಿ ಪ್ರಹಾರ ಮಾಡಬೇಕಾಗಿ ಬಂದುದನ್ನು ಪತ್ರಿಕೆಗಳು ವರದಿ ಮಾಡಿವೆ.

ಇಂಥ ಪರಿಸರದಲ್ಲಿ ಕೆಲಸಮಾಡಬೇಕಾದ ಸ್ಥಿತಿಯಲ್ಲಿರುವ ಬ್ಯಾಂಕುಗಳು ನಿಜವಾಗಿಯೂ ಅರ್ಹ

ರಲ್ಲದ ಅರ್ಜಿದಾರರಿಗೆ ಯಾವುದೇ ಕಾರಣ ಕೊಟ್ಟು ಸಾಲ ನಿರಾಕರಿಸುವುದು ಸಾಧ್ಯವೆಂದು ನಂಬುವುದು ತಾನೇ ಹೇಗೆ ?

ಸಾಲದ ಅರ್ಜಿ ನಮೂನೆಗಳನ್ನು ಸಾರ್ವಜನಿಕರಿಗೆ ನೀಡುವ, ಭರ್ತಿಯಾದ ಅರ್ಜಿಗಳನ್ನು ಬ್ಯಾಂಕು ಸ್ವೀಕರಿಸುವ ಮತ್ತು ಸಾಲ ಮಂಜೂರು ಮಾಡಬೇಕಾದ ಕೊನೆಯ ದಿನಾಂಕಗಳನ್ನು ರಿಸರ್ವ್ ಬ್ಯಾಂಕಿನ ಸುತ್ತೋಲೆ ಬ್ಯಾಂಕುಗಳಿಗೆ ತಿಳಿಸುವ ಹೊತ್ತಿಗೆ ಅನೇಕ ಶಾಖೆಗಳು ಸಾರ್ವಜನಿಕರ ಒತ್ತಡ ತಾಳಲಾರದೆ ತಂತಮ್ಮ ಗುರಿಗಳನ್ನು ಮುಟ್ಟುವಷ್ಟು ಸಂಖ್ಯೆಯ ಸಾಲಗಳನ್ನು ಮಂಜೂರು ಮಾಡಿಯಾಗಿತ್ತು.

## ಲಾಭಪ್ರದತೆಯ ಮೇಲೆ ಪರಿಣಾಮ

ಸಾಲ ವಸೂಲಾತಿಯ ಸಮಸ್ಯೆ ಬ್ಯಾಂಕುಗಳ ಲಾಭಪ್ರದತೆಗೆ ಸವಾಲಾಗಿ ನಿಂತಿದೆ. ಲಾಭದ ಅಂಕಿ ಅಂಶಗಳೇನೇ ಇರಲಿ, ಬ್ಯಾಂಕುಗಳು ನೀಡಿದ ಸಾಲದ ಶೇ. 54ರಷ್ಟು ಮೊತ್ತ ವಸೂಲಾಗದೆ ಉಳಿದಿರುವುದು ಆತಂಕಕಾರಿಯಲ್ಲವೆ ? 1 ಲಕ್ಷ ರೂ.ಗಿಂತ ಹೆಚ್ಚಿನ ಉದರಿ ಸೌಲಭ್ಯ ಪಡೆದ ದೊಡ್ಡ ಕೈಗಾರಿಕಾ ಘಟಕಗಳಿಂದ ಬರಬೇಕಾಗಿದ್ದ ಬಾಕಿ 1984ರ ಅಂತ್ಯಕ್ಕೇ ರೂ. 2,340 ಕೋಟಿ ಇದ್ದಿತೆಂದರೆ ಈ ಸಮಸ್ಯೆಯ ಅಗಾಧತೆ ಅರಿವಾಗಬಹುದು. ವ್ಯವಸಾಯವೇ ಮುಂತಾದ ಆದ್ಯತಾ ವಲಯಗಳ ಸಾಲದ ಮರುಪಾವತಿಯೂ ಅಸಮರ್ಪಕ—ಶೇ. 50ಕ್ಕಿಂತ ಕಡಿಮೆ. ಅಂಥ ಸಾಲಗಳನ್ನು ಏರ್ಪಡಿಸುವುದಕ್ಕೆ ಆದ್ಯತೆ ನೀಡಬೇಕಾಗಿರುವ ಈ ಸಂದರ್ಭದಲ್ಲಿ ಕಾರ್ಯಾಚರಣೆಯ ಹಲವು ತೊಡರುಗಳನ್ನು ತಂದೊಡ್ಡುವ ಸರಕಾರದ ಹೊಸ ಧೋರಣೆಗಳು ಪ್ರಶ್ನಾರ್ಹವಾಗುತ್ತವೆ. ಬಡವರಿಗೆ ನೆರವು ದೊರೆಯಬೇಕೆಂಬುದು ನಿರ್ವಿವಾದವಾದರೂ ಆ ನೆರವು ಸಾರ್ಥಕವಾಗುವುದನ್ನು ಖಚಿತಪಡಿಸಿಕೊಳ್ಳುವ ಜವಾಬ್ದಾರಿಯನ್ನು ಮರೆಯುವಂತಿಲ್ಲ. ಸಾಧಾರಣ ಸಾಲಗಳ ಉಸ್ತುವಾರಿಯಲ್ಲೇ ಸ್ಪಷ್ಟವಾಗಿ ಸೋತಿರುವ ಬ್ಯಾಂಕಿಂಗ್ ಉದ್ಯಮದಿಂದ ಹೊಸ ಹೊಸ ಜವಾಬ್ದಾರಿಗಳ ಈಡೇರಿಕೆಯನ್ನು ನಿರೀಕ್ಷಿಸುವುದು ಹಾಸ್ಯಾಸ್ಪದವಾಗುತ್ತದೆ. 'ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವುದಯ್ಯ ?' ಎಂಬ ವಚನಕಾರರ ನುಡಿ ನೆನಪಾಗದಿರುವುದಿಲ್ಲ.

ದೊಡ್ಡ ಸಾಲಗಳನ್ನು ಕೊಟ್ಟರೆ ಏನೂ ಮಾಡದ ಬ್ಯಾಂಕುಗಳು ಸಣ್ಣ ಸಾಲ ಕೊಡಲು ಹಿಂದೇಟು ಹಾಕುವುದೇಕೆ ? ಎಂಬ ಪ್ರಶ್ನೆ ಸಹಜವಾಗಿ ಏಳಬಹುದಾದರೂ ಅದಕ್ಕೆ ನಿರ್ದಿಷ್ಟ ಉತ್ತರಗಳಿವೆ :

1 ಸಣ್ಣ ಸಾಲಗಳ ವಿಷಯದಲ್ಲಿ ಪ್ರತಿ ಸಾಲದ ಮೊತ್ತ ಗೌಣವಾದರೂ ಸಂಖ್ಯೆ ಹೆಚ್ಚು. ಆದ್ದರಿಂದ ಸಿಬ್ಬಂದಿಗೆ ಕೆಲಸದ ಹೊರೆ ಅಧಿಕ. ಅರ್ಜಿದಾರರ ಸಂದರ್ಶನ, ಫಲಾನುಭವಿಗಳನ್ನು ಗುರುತಿಸುವುದು, ಅರ್ಜಿಗಳನ್ನು ತುಂಬುವುದು, ಪರಿಶೀಲಿಸುವುದು ; ಉದರಿ ಅಗತ್ಯದ ನಿರ್ಧಾರಣ, ಉದರಿಗೆ ಶಿಫಾರಸು, ಮಂಜೂರಾತಿ ; ಸಾಲಗಾರನ ಆದಾಯ ಕುರಿತ ಮಾಹಿತಿ ಸಂಗ್ರಹಣೆ, ಸಾಲಗಾರರ ವರ್ಗೀಕರಣ, ಇತರ ಅಭಿಕರಣಗಳೊಂದಿಗೆ ಪತ್ರವ್ಯವಹಾರ, ಸಹಾಯಧನ/ಸ್ವಭಾಗದ ಹಣ ಮುಂತಾದವುಗಳನ್ನು ಕುರಿತ ಪ್ರತ್ಯೇಕ ವಹಿವಾಟುಗಳು, ಕಾರ್ಯವಿಧಾನಗಳು ಮತ್ತು ಆ ಹಣವನ್ನಿಡಲು ಪ್ರತ್ಯೇಕ ಖಾತೆಗಳನ್ನು ತೆರೆಯುವುದು/ಅವುಗಳ ನಿರ್ವಹಣೆ ; ದಸ್ತೈವಜುಗಳನ್ನು ಪಡೆಯುವುದು, ಸಾಲಗಾರರಿಗೆ ತಿಳಿವಳಿಕೆ ನೀಡುವುದು, ಮಂಜೂರಾತಿ ಪೂರ್ವದ ಭೇಟಿ, ಪಾಸ್ ಪುಸ್ತಕ ನೀಡಿಕೆ, ಬಟವಾಡೆ, ಮಂಜೂರಾತಿಯ ಅನಂತರದ ಭೇಟಿ, ಅನೇಕ ಸಂದರ್ಭಗಳಲ್ಲಿ ಆಸ್ತಿಗಳನ್ನು ಕೊಳ್ಳಲು ಸಾಲಗಾರರಿಗೆ ನೆರವಾಗುವುದು—ಇವೇ ಮುಂತಾದವಲ್ಲದೆ ಕಾಲಕಾಲಕ್ಕೆ ಉದರಿಯ ಉಸ್ತುವಾರಿ, ವಸೂಲಾತಿ ಮುಂತಾದ ಕೆಲಸಗಳು ; ಕೇಂದ್ರ ಕಛೇರಿಗೆ ಸಾಲಗಳ ಸ್ಥಿತಿ ಕುರಿತ ನಿಯತಕಾಲಿಕ ವರದಿಗಳನ್ನು ಸಲ್ಲಿಸುವುದು, ಸಾಲಕೊಟ್ಟರೆ ಪುನರುಜ್ಜೀವನಗೊಳಿಸುವ/ಹಿಂದಿರುಗಿಸುವಂತೆ ತಗಾದೆ ಮಾಡುವ/ಕಾನೂನು ಕ್ರಮ ಕೈಗೊಳ್ಳುವ ಕೆಲಸಗಳು ; ಕೆಟ್ಟ ಸಾಲವೆಂದು ಪರಿಗಣಿಸಲು ಶಿಫಾರಸು, ವಜಾ ಮಾಡಲು ಸಲಹೆ, ಖಾತರಿ ಸಂಸ್ಥೆಯಿಂದ ಖಾತರಿಯ ಹಣಕ್ಕಾಗಿ ದಾವೆ ಸಲ್ಲಿಸುವುದು, ಬಂದ ಹಣವನ್ನು ಪ್ರತ್ಯೇಕ ಖಾತೆಗಳಲ್ಲಿಟ್ಟುಕೊಳ್ಳುವುದಲ್ಲದೆ ವಸೂಲಾತಿಯ ಯತ್ನವನ್ನು ಮುಂದುವರಿಸುವುದು—ಹೀಗೆ ನಾನಾ ರೀತಿಯ ಕೆಲಸಗಳ ಒತ್ತಡ. ಸಾಲಗಳ ಸಂಖ್ಯೆ ಅಧಿಕವಾದಂತೆ ಸಿಬ್ಬಂದಿಯನ್ನು ಹೆಚ್ಚಿಸಲು ಬ್ಯಾಂಕುಗಳಿಗೆ ಸಾಧ್ಯವಿಲ್ಲ ; ಏಕೆಂದರೆ ಈ ಸಾಲಗಳ ಮೇಲಿನ ವರಮಾನ ಏನೇನೂ ಇಲ್ಲವೆಂಬುದಿರಲಿ. ಪೂರ್ತ ಹಣ ಬಡ್ಡಿ ಸಮೇತ ವಸೂಲಾದರೂ ಉಸ್ತುವಾರಿಯ ವೆಚ್ಚ ಲೆಕ್ಕಿಸಿದರೆ ಬ್ಯಾಂಕಿಗೆ ನಷ್ಟವೇ !

ದೊಡ್ಡ ಸಾಲಗಳಲ್ಲೂ ಇಂಥವೇ ಕೆಲಸಗಳು ಇರುವುವಾದರೂ ಸಂಖ್ಯೆ ಸೀಮಿತವಾಗಿರುವುದರಿಂದ ಸಮಯದ ಕೊರತೆಯ ಸಮಸ್ಯೆ ಬಾಧಿಸುವುದಿಲ್ಲ ವೆಂಬುದೂ ಅವುಗಳ ಮೇಲಣ ಬಡ್ಡಿಯ ದರ ಅಧಿಕವಾದ್ದರಿಂದ ವರಮಾನ ಅಧಿಕ ಎಂಬುದೂ ಗಮನಾರ್ಹ. ಬ್ಯಾಂಕುಗಳ ಉದ್ದೇಶ ಲಾಭ ಗಳಿಕೆಯೊಂದೇ ಅಲ್ಲ ಎಂಬುದು ನಿಜವಾದರೂ ಉಸ್ತುವಾರಿ ಸಿಬ್ಬಂದಿಯನ್ನು ಅಗತ್ಯವಾದಷ್ಟಾದರೂ ಹೆಚ್ಚಿಸಲು ಅಧಿಕ ವರಮಾನ ಬೇಡವೆ ? ಇಲ್ಲಿ ಸಾಲದ ಮೊತ್ತ, ಸಾಲ ಮರುಪಾವತಿಯಾಗದಿದ್ದರೆ ಆಗುವ ನಷ್ಟದ ಲೆಕ್ಕಾಚಾರಕ್ಕಿಂತ ಪೂರ್ತ ಹಣ ಬಡ್ಡಿಯ ಸಮೇತ ಸಕಾಲದಲ್ಲಿ ಮರುಪಾವತಿಯಾದರೂ ಸಣ್ಣ ಸಾಲಗಳ ಸಂಖ್ಯೆ ಹೆಚ್ಚಿದಂತೆ ಬ್ಯಾಂಕುಗಳಿಗೆ ಅಧಿಕ ನಷ್ಟವಾಗುವ ಸಂಭವ ಇರುವುದನ್ನು ಮನಗಾಣಬೇಕಾದುದು ಅಗತ್ಯವಾಗುತ್ತದೆ.

2 ಫಲಾನುಭವಿಗಳನ್ನು ಗುರುತಿಸುವಲ್ಲಿಯ ತೊಡಕು ಅನುಭವಿಗಳಿಗೇ ಗೊತ್ತು. ಒಂದೇ ಚಟುವಟಿಕೆಗೆ ಒಂದಕ್ಕಿಂತ ಹೆಚ್ಚು ಸಾಲಗಳು, ಒಬ್ಬನೇ ವ್ಯಕ್ತಿಗೆ ಹಲವು ಸಾಲಗಳು, ಕುಟುಂಬದ ಒಬ್ಬನಿಗಿಂತ ಹೆಚ್ಚು ಸದಸ್ಯರಿಗೆ ಅದೇ ಚಟುವಟಿಕೆಯ ಮೇಲೆ ಸಾಲ, ಸುಳ್ಳು ಹೆಸರುಗಳಲ್ಲಿ ಸಾಲ, ಸಾಲಗಾರರು ನಾಪತ್ತೆಯಾದಾಗ ಉದ್ಭವಿಸುವ ತೊಡಕುಗಳು—ಹೀಗೆ.

3 ಬ್ಯಾಂಕುಗಳಿಗೆ ಉಸ್ತುವಾರಿ, ವಸೂಲಾತಿ ಕಷ್ಟವಾಗಿರುವುದರ ದುರ್ಲಾಭ ಪಡೆದು ಸಾಲಗಳನ್ನು ಮರುಪಾವತಿ ಮಾಡದೆಯೇ ಇರಬಹುದೆಂಬ ಭಾವನೆ ಜನಮನದಲ್ಲಿ ಬೇರೂರುತ್ತಿದೆ. ಇದರಿಂದ ಹೇಗಾದರೂ ಮಾಡಿ ಬ್ಯಾಂಕ್ ಸಾಲ ಪಡೆದುಕೊಳ್ಳಬಯಸುವ ಮನೋಭಾವವುಳ್ಳವರ ಪಡೆಯೊಂದು ನಿರ್ಮಾಣವಾಗುತ್ತಿದೆ. ನೀಡಿದ ಸಾಲಗಳು ಅನುತ್ಪಾದಕವಾಗುವ ಸಂಭವಗಳು ಹೆಚ್ಚಾಗುವುದು ಇದರಿಂದಲೇ.

4 ಭಿನ್ನಕ ಬಡ್ಡಿದರದಲ್ಲಿ ನೀಡುವ ಸಾಲಗಳಿಗೆ ತಗಲುವ ವೆಚ್ಚ ಪ್ರತಿ ರೂ. 100 ಸಾಲಕ್ಕೆ ಸುಮಾರು ರೂ. 24 ಎಂದು ಒಂದು ಅಂದಾಜು. ಇದೇ ಆಧಾರದಿಂದ ಸರಕಾರದ ಸುಲಭ ಸಾಲಗಳಿಗೂ ಸುಮಾರು ರೂ. 18–20 ವೆಚ್ಚವಾಗುವುದೆಂದು ಊಹಿಸಬಹುದು.

ಇನ್ನೂ ಆರಂಭವಾಗುತ್ತಿರುವ ಈ ಯೋಜನೆ ಬ್ಯಾಂಕುಗಳ ಲಾಭಪ್ರದತೆಯ ಮೇಲೆ ಉಂಟು ಮಾಡಬಹುದಾದ ಪರಿಣಾಮ ಕುರಿತು ಚಿಂತಿಸಬೇಕಾದ ಅಗತ್ಯ ಏನಿದೆ ? ಹಾಗಾದರೆ ಈ ಯೋಜನೆ ನಿಷ್ಪ್ರಯೋಜಕವೆ ? ಎಂಬ ಪ್ರಶ್ನೆಗಳು ನಿಲ್ಲುತ್ತವೆ. ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಕಲುಷಿತಗೊಳ್ಳುತ್ತಿರುವ ನಮ್ಮ ಬ್ಯಾಂಕಿಂಗ್ ವ್ಯವಸ್ಥೆಯ ಅವಲೋಕನ ಅಗತ್ಯವಾಗುತ್ತದೆ.

ಬ್ಯಾಂಕಿನ ವ್ಯವಹಾರದಲ್ಲಿ ರಾಜಕೀಯ ಹಸ್ತಕ್ಷೇಪದ ಪ್ರಸ್ತಾಪ ಬಹು ದಿನಗಳಿಂದ ಆಗಾಗ ಬರುತ್ತಲೇ ಇದೆಯಾದರೂ ಇದೀಗ ಪರಿಸ್ಥಿತಿ ವಿಷಮಿಸಿರುವುದು ಅನೇಕರ ಗಮನಕ್ಕೆ ಬಂದಿದೆ. ಬಡತನದ ನಿರ್ಮೂಲನ ಕಾರ್ಯದಲ್ಲಿ ಸರಕಾರದ ಪ್ರಯತ್ನಕ್ಕೆ ಬ್ಯಾಂಕ್ ಅಧಿಕಾರಿಗಳು ಅಡ್ಡಿಯಾಗಿರುವರೆಂಬ ತೀವ್ರವಾದ ಆಪಾದನೆ ಹೊರಿಸಲಾಗಿದೆ. ಬ್ಯಾಂಕುಗಳಿಂದ ಸಾರ್ವಜನಿಕರು ಹೆಚ್ಚು ಹೆಚ್ಚು ನಿರೀಕ್ಷಿಸುತ್ತಿರುವಂತೆ ಏರುತ್ತಿರುವ ಕೆಲಸದ ಒತ್ತಡದಲ್ಲಿ ಹದಗೆಟ್ಟ ಸಾಲಗಳನ್ನು ನಿರ್ವಹಿಸಲು ಹೆಣಗುತ್ತಿರುವ ಬ್ಯಾಂಕುಗಳ ಕ್ಷೇತ್ರ ಸಿಬ್ಬಂದಿಯ ಮನಃಸ್ವಾಸ್ಥ್ಯ ಕದಡಿದೆ, ಆತ್ಮವಿಶ್ವಾಸ ಮರೆಯಾಗಿದೆ. ಬ್ಯಾಂಕ್ ಉದರಿಯ ಉಪಯೋಗ, ಸಾಲದ ಮರುಪಾವತಿ ಮೊದಲಾದ ವಿಷಯಗಳಲ್ಲಿ ವಿವಿಧ ಹಿತಾಸಕ್ತಿಗಳು ಫಲಾನುಭವಿಗಳನ್ನು ತಪ್ಪು ದಾರಿಗೆ ಎಳೆಯುತ್ತಿವೆ. ಮಧ್ಯವರ್ತಿಗಳ ಹಾವಳಿ

ಹೆಚ್ಚುತ್ತಿದೆ. ಸರಕಾರದ ಯೋಜನೆಗಳಡಿ ನೀಡಲಾಗುತ್ತಿರುವ ಸಾಲದ ಮರುಪಾವತಿ ದರವಂತೂ ತೀರ ಕಡಿಮೆ. ಈ ಸಾಲಗಳು ಕೆಟ್ಟರೆ ಉದರಿ ಖಾತರಿ ನಿಗಮದಿಂದ 'ಹಕ್ಕು' (Claim) ಪಾವತಿಯಾಗಬಹುದೆಂಬ ಭ್ರಮೆಯೂ ಈಗೀಗ ದೂರವಾಗುತ್ತಿದೆ. ಅದು ಪಾವತಿಯಾಗಬೇಕಾದರೆ, ಸಂಬಂಧಿತ ಸಾಲದ ಉಸ್ತುವಾರಿ ಚೆನ್ನಾಗಿ ನಡೆದಿರಬೇಕು. ಫಲಾನುಭವಿಯನ್ನುಗುರುತಿಸುವುದು, ಸಾಲ ಮಂಜೂರು, ಉದರಿಯ ಉಪಯೋಗ ಮುಂತಾದವುಗಳಲ್ಲಿ ಅಲಕ್ಷ್ಯವಿಲ್ಲವೆಂದು ಸಾಧಿಸಬೇಕಾಗುತ್ತದೆ. ಹೀಗಾಗಿ, ಇಂದಿನ ಸ್ಥಿತಿಯಲ್ಲಿ ಹೊರಬರುವ ಇಂಥ ಹೊಸ ಯೋಜನೆ ಬ್ಯಾಂಕಿನ ಲಾಭಪ್ರದತೆಯನ್ನು ಕುಂಠಿತಗೊಳಿಸುವ ವಿಷಯದಲ್ಲಿ ಸಂದೇಹವಿರಬೇಕಾದ ಅಗತ್ಯವಿಲ್ಲ.

ಅಪಾರ ಸಾರ್ವಜನಿಕ ಹಣ ದುರುಪಯೋಗವಾಗುವುದನ್ನು ಪ್ರತ್ಯಕ್ಷ ಕಂಡರೂ ಅಸಹಾಯಕರಂತಿರುವ ಬ್ಯಾಂಕರರು ಬ್ಯಾಂಕಿಂಗ್ ವ್ಯವಸ್ಥೆಗೆ ಒದಗಿದ ಈ ದುಃಸ್ಥಿತಿಯಿಂದ ಅದನ್ನು ಪಾರು ಮಾಡುವ ದಿಸೆಯಲ್ಲಿ ಚಿಂತನೆ ಹರಿಸಬೇಕಾಗಿದೆ. ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಬ್ಯಾಂಕುಗಳಿಗೆ ನಿಜವಾಗಿ ಸಾಧ್ಯವಾಗಬೇಕಾದರೆ ಅವು ರಾಜಕೀಯ ಹಸ್ತಕ್ಷೇಪದಿಂದ ಸಂಪೂರ್ಣವಾಗಿ ಮುಕ್ತವಾಗಬೇಕು, ಕದಡಿರುವ ವಾತಾವರಣ ತಿಳಿಯಾಗಬೇಕು. ಅದಿಲ್ಲದೆ ಪರಿಸ್ಥಿತಿ ಹೀಗೇ ಮುಂದುವರಿದರೆ ಸುಂದರವಾದ ಯೋಜನೆಗಳು ವಾಸ್ತವದಲ್ಲಿ ನಿಷ್ಪ್ರಯೋಜಕವಾಗುವುದಿರಲಿ, ಅಪಾಯಕಾರಿಯಾಗುವುದೂ ನಿಸ್ಸಂದೇಹ.

ಬಡವರಿಗೆ ಸಾಮಾಜಿಕ ನ್ಯಾಯ ದೊರಕಿಸುವ ಯೋಜನೆಗಳ ಹೆಸರಿನಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಡೆಯುತ್ತಿರುವ ಅಪಾಯಕಾರಿ ದೊಂಬರಾಟದಲ್ಲಿ ಬ್ಯಾಂಕುಗಳ ಜೀವಂತಿಕೆ ಪಣವಾಗಿದೆಯೆಂಬುದನ್ನು ಯಾವ ಪ್ರಜ್ಞಾವಂತನೂ ಮರೆಯುವಂತಿಲ್ಲ.

## ಅನುಬಂಧ 1

ಪಟ್ಟಣದ ಬಡಜನರ ಸ್ವೋದ್ಯೋಗ ಕಾರ್ಯಕ್ರಮದಲ್ಲಿ ( SEPUP) ಸಾಲ ಪಡೆಯಲು ಅರ್ಹವಾಗುವ ಕೆಲವು ಚಟುವಟಿಕೆಗಳು

1 ಸೈಕಲ್ ರಿಕ್ಷಾ/ಎಳೆಯುವ ರಿಕ್ಷಾ
2 ನೇಯ್ಗೆ
3 ಚಮ್ಮಾರಿಕೆ
4 ಮರಗೆಲಸ
5 ಕುಂಭಕಾರಿಕೆ
6 ಪುಸ್ತಕಕ್ಕೆ ರಟ್ಟು ಕಟ್ಟುವಿಕೆ
7 ತರಕಾರಿ ಮಾರುವಿಕೆ
8 ಸೈಕಲ್ ಷಾಪ್
9 ದೋಭಿ ಕೆಲಸ
10 ಕಡಲೆಕಾಯಿ ಮಾರುವಿಕೆ
11 ಕಮ್ಮಾರಿಕೆ
12 ಗಾರೆ ಕೆಲಸ
13 ಬೆತ್ತದ ಕುರ್ಚಿ ಹೆಣಿತ
14 ಪಾನ್ ಬೀಡಾ ಅಂಗಡಿ
15 ಸ್ಕೂಟರ್ ರಿಪೇರಿ
16 ಪೀಠೋಪಕರಣ ತಯಾರಿಕೆ
17 ಬಣ್ಣ ಬಳಿಯುವಿಕೆ
18 ಚಹಾ ಅಂಗಡಿ
19 ಸ್ಟೌವ್ ಮತ್ತು ಪ್ರೆಷರ್ ಕುಕರ್ ರಿಪೇರಿ
20 ಬೆಸುಗೆ/ಫ್ಯಾಬ್ರಿಕೇಷನ್
21 ಜೇಡಿಮಣ್ಣಿನ ಬೊಂಬೆ ತಯಾರಿಕೆ
22 ಕಾಗದದ ಚೀಲ/ಪಾಲಿಥೀನ್ ಚೀಲ ಮಾರಾಟ
23 ಪತ್ರಿಕೆ ಹಾಗೂ ಪುಸ್ತಕದ ಅಂಗಡಿ
24 ಹಣ್ಣು ಮಾರುವಿಕೆ
25 ಹಣ್ಣಿನ ರಸ ಮಾರುವಿಕೆ
26 ಸಿಂಪಿಗ/ಸಿದ್ಧ ಉಡುಪು ತಯಾರಿಕೆ
27 ಕಾರ್ಡ್‌ಬೋರ್ಡ್ ಪೆಟ್ಟಿಗೆ ತಯಾರಿಕೆ
28 ಊದುಕಡ್ಡಿ ತಯಾರಿಕೆ
29 ಟೈರ್ ರೀಟ್ರೆಡಿಂಗ್
30 ಪೇಪರ್ ಹುಡುಗ
31 ಪಾಲಿಷ್ ಹುಡುಗ
32 ಹಾಲು ಮಾರಾಟ
33 ಮೀನು ಮಾರಾಟ
34 ಬೀಡಿ ಸುತ್ತುವಿಕೆ

## ಅನುಬಂಧ 2

### ಘೋಷಣಾ ಪತ್ರದ ಮಾದರಿ

ನಾನು, ಶ್ರೀ.........ಅವರ ಮಗ.........ವಯಸ್ಸು.........ಭಾರತ ಸರಕಾರದ ಪಟ್ಟಣ ಪ್ರದೇಶದ ಬಡಜನರಿಗಾಗಿ ಸ್ವಯಂ ಉದ್ಯೋಗ ಕಾರ್ಯಕ್ರಮದ ಮೇರೆಗೆ ರೂ.......(ರೂಪಾಯಿ ............) ಸಾಲಕ್ಕಾಗಿ ಈ ಮೂಲಕ ಅರ್ಜಿ ಹಾಕಿಕೊಳ್ಳುತ್ತೇನೆ.

ಈ ಸಾಲವನ್ನು ಮಂಜೂರು ಮಾಡುವ ಸಂಬಂಧದಲ್ಲಿ ನಾನು ಈ ಮುಂದಿನಂತೆ ಘೋಷಿಸುತ್ತೇನೆ :

1 ನಾನು.........ಊರಿನ ಶಾಶ್ವತ ನಿವಾಸಿಯಾಗಿದ್ದು, ದಿನಾಂಕ......ರಿಂದ ಈ ಪಟ್ಟಣದಲ್ಲಿ ವಾಸವಾಗಿದ್ದೇನೆ.

2 ನನ್ನ ಹೆಸರು ನಮೂದಾಗಿರುವ,.........ಊರಿನ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕಛೇರಿ ನೀಡಿರುವ ಪಡಿತರ ಕಾರ್ಡ್ ಸಂಖ್ಯೆ.........ರಲ್ಲಿ ಸೇರಿರುವ ನನ್ನ ಕುಟುಂಬದ ಸದಸ್ಯರೆಲ್ಲರ ಒಟ್ಟು ಆದಾಯ ತಿಂಗಳಿಗೆ...... ರೂ.

3 ಪಟ್ಟಣ ಪ್ರದೇಶದ ಬಡ ಜನರಿಗಾಗಿ ಸ್ವಯಂ ಉದ್ಯೋಗ ಯೋಜನೆ ಅಥವಾ ಬೇರೆ ಯಾವುದೇ ಉದ್ಯೋಗ ಕಲ್ಪಿಸುವ ಯೋಜನೆಯಡಿ ಬರುವಂಥ ಯಾವುದೇ ಚಟುವಟಿಕೆಯ ಸಂಬಂಧದಲ್ಲಿ ನಾನು ಬ್ಯಾಂಕ್/ಉದರಿ ಸಂಸ್ಥೆಯ ಸಾಲಗಾರನಲ್ಲ.

4 ನಾನು ಯಾವುದೇ ಬ್ಯಾಂಕ್ ಅಥವಾ ಯಾವುದೇ ಉದರಿ ಸಂಸ್ಥೆಯ ಕಟಬಾಕಿದಾರನಲ್ಲ.

ಸಾಲಗಾರನ ಹೆಸರು :

ವಿಳಾಸ : ಸಾಲಗಾರನ ಸಹಿ

●

---

# ಭಾರತದಲ್ಲಿ ವಿದ್ಯುನ್ಮಾನ ಬ್ಯಾಂಕಿಂಗು

[8ನೆಯ ಪುಟದಿಂದ ಮುಂದುವರಿದುದು]

ಭಾರತೀಯ ಸ್ಟೇಟ್ ಬ್ಯಾಂಕು ಕ್ರಿ.ಶ. 2000ದ ವೇಳೆಗೆ ಉಪಗ್ರಹದ ಮೂಲಕ ತನ್ನೆಲ್ಲ ಶಾಖೆಗಳನ್ನು ಒಂದು ಗಣಕಜಾಲದಲ್ಲಿ ಒಗ್ಗೂಡಿಸುವ ಮಹಾತ್ವಾಕಾಂಕ್ಷೆಯ ಕಾರ್ಯಕ್ರಮವನ್ನು ಹಾಕಿಕೊಂಡಿದೆಯಂತೆ.

ಇದಕ್ಕೆ ತಗಲುವ ವೆಚ್ಚವನ್ನು ಗ್ರಾಹಕರು ಭರಿಸಬೇಕಲ್ಲ ಎಂದರೆ, ಸೇವೆ ಉತ್ತಮಗೊಂಡರೆ ಗ್ರಾಹಕರು ಅದರ ವೆಚ್ಚವನ್ನು ಭರಿಸಲು ಅಷ್ಟಾಗಿ ಚಿಂತಿಸುವುದಿಲ್ಲ. ಇದು ಎಲ್ಲ ಕ್ಷೇತ್ರದಲ್ಲಿಯೂ ನಿಜ.

ನಮ್ಮ ವಿದ್ಯುನ್ಮಾನ ಬ್ಯಾಂಕಿಂಗ್ ತನ್ನ ಎಲ್ಲ ಆರಂಭಿಕ ಚಡಪಡಿಕೆಗಳನ್ನು, ಗೊಂದಲಗಳನ್ನು ನಿವಾರಿಸಿಕೊಂಡು ವಿದ್ಯುನ್ಮಾನ ಬ್ಯಾಂಕಿಂಗಿನಲ್ಲಿಯೇ ತನ್ನ ಉಜ್ವಲ ಭವಿಷ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದರಲ್ಲಿ ಸಂದೇಹವೇ ಇಲ್ಲ.

ಭಾರತದ ಗ್ರಾಹಕರಿಗೆ ಇದರ ಲಾಭ ದೊರಕಲಿ

●

# ಅಮೆರಿಕದ ಬ್ಯಾಂಕಿಂಗ್ ವ್ಯವಸ್ಥೆ

**ಭಾರತದಂತೆ ಅಮೆರಿಕವೂ ದೊಡ್ಡ ದೇಶ, ಭಾರತಕ್ಕಿಂತ ದೊಡ್ಡ ದೇಶ. ಅತ್ಯಂತ ಆಧುನಿಕವಾದ ಆ ದೇಶದ ಬ್ಯಾಂಕಿಂಗ್ ವ್ಯವಸ್ಥೆ ನಮ್ಮದಕ್ಕಿಂತ ಎಷ್ಟು ಭಿನ್ನ? ಅಮೆರಿಕದಿಂದ ನಾವು ಕಲಿಯಬೇಕಾದ ಪಾಠವೇನು?**

ಅಮೆರಿಕದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ 18ನೆಯ ಶತಮಾನದಲ್ಲಿ ಪ್ರಾರಂಭವಾಯಿತು. ಅಮೆರಿಕದ ಪ್ರಥಮ ಬ್ಯಾಂಕಾದ ಬ್ಯಾಂಕ್ ಆಫ್ ನಾರ್ತ್ ಅಮೆರಿಕ ಫಿಲಿಡೆಲ್ಫಿಯಾದಲ್ಲಿ ಸ್ಥಾಪಿತವಾಯಿತು. 1863ರಲ್ಲಿ ಅಮೆರಿಕದ ಕಾಂಗ್ರೆಸ್ ರಾಷ್ಟ್ರೀಯ ಬ್ಯಾಂಕಿಂಗ್ ಅಧಿನಿಯಮವನ್ನು ಜಾರಿಗೆ ತಂದಿತು. 1913ರಲ್ಲಿ ಅಮೆರಿಕದ ಕಾಂಗ್ರೆಸ್ಸು ಫೆಡರಲ್ ರಿಸರ್ವ್ ಅಧಿನಿಯಮವನ್ನು ಜಾರಿಗೆ ತಂದಿತು. ಈ ಅಧಿನಿಯಮಕ್ಕನುಗುಣವಾಗಿ ಅಮೆರಿಕದ ಇಂದಿನ ಬ್ಯಾಂಕಿಂಗ್ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತಿದೆ.

## ಏಕಕ ಬ್ಯಾಂಕಿಂಗ್ ವ್ಯವಸ್ಥೆ

ಅಮೆರಿಕದಲ್ಲಿ ಏಕಕ ಬ್ಯಾಂಕಿಂಗ್ ವ್ಯವಸ್ಥೆ ಅಸ್ತಿತ್ವದಲ್ಲಿದೆ. ಏಕಕ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಪ್ರತಿಯೊಂದು ಬ್ಯಾಂಕು ತನ್ನದೇ ಆದ ವೈಯಕ್ತಿಕ ಅಸ್ತಿತ್ವ ಹೊಂದಿರುತ್ತದೆ. ಈ ವ್ಯವಸ್ಥೆಯಲ್ಲಿ ಬೇರೆ ಬೇರೆ ಏಕಕ (unit) ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ. ಇದಕ್ಕೆ ವಿರುದ್ಧವಾದ ಶಾಖಾ ಬ್ಯಾಂಕಿಂಗ್ (Branch Banking) ಪದ್ಧತಿಯನ್ನು ಭಾರತದಲ್ಲಿ ಕಾಣುತ್ತೇವೆ. ನಮ್ಮ ದೇಶದಲ್ಲಿ 28 ರಾಷ್ಟ್ರೀಕೃತ ಬ್ಯಾಂಕುಗಳು ದೇಶದ ಹೆಚ್ಚಿನ ವಾಣಿಜ್ಯ ಮತ್ತು ಬ್ಯಾಂಕ್ ವ್ಯವಹಾರಗಳನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿವೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಸಾವಿರಾರು ಬ್ಯಾಂಕುಗಳಿದ್ದು, ಅವುಗಳಲ್ಲಿ ಪ್ರತಿ ಬ್ಯಾಂಕೂ ಸಾಮಾನ್ಯವಾಗಿ ಕೆಲವೇ ಶಾಖೆಗಳನ್ನು ಹೊಂದಿರುತ್ತದೆ.

ಅಮೆರಿಕದಲ್ಲಿ ಎರಡು ಬಗೆಯ ವಾಣಿಜ್ಯ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ. ಮೊದಲನೆಯ ಬಗೆಯ ಬ್ಯಾಂಕುಗಳಾದ ರಾಷ್ಟ್ರೀಯ ಚಾರ್ಟರ್ಡ್ ಬ್ಯಾಂಕುಗಳು ದೇಶದ ಉದ್ದಗಲಕ್ಕೂ ವ್ಯವಹಾರ ನಡೆಸಲು ಪರವಾನಗಿ ಪಡೆದಿರುತ್ತವೆ. ಅಮೆರಿಕನ್ ಎಕ್ಸ್‌ಪ್ರೆಸ್ ಬ್ಯಾಂಕ್, ಸಿಟಿ ಬ್ಯಾಂಕ್ ಮುಂತಾದ ರಾಷ್ಟ್ರೀಯ ಚಾರ್ಟರ್ಡ್ ಬ್ಯಾಂಕುಗಳು ದೇಶದ ಉದ್ದಗಲಕ್ಕೂ ವಾಣಿಜ್ಯ ವ್ಯವಹಾರಗಳನ್ನು ನಡೆಸುತ್ತವೆ. ಇವು ಯಾವುದೇ ರಾಜ್ಯದಲ್ಲಿ ಶಾಖೆಗಳನ್ನು ತೆಗೆಯಬಹುದು. ಎರಡನೆಯ ಪ್ರಕಾರದ ಬ್ಯಾಂಕುಗಳಾದ ರಾಜ್ಯ ಚಾರ್ಟರ್ಡ್ ಬ್ಯಾಂಕುಗಳು ಆಯಾ ರಾಜ್ಯಗಳಲ್ಲಿ ಮಾತ್ರ ವ್ಯವಹಾರ ನಡೆಸಲು ಪರವಾನಗಿ ಪಡೆದಿರುತ್ತವೆ. ರಾಷ್ಟ್ರೀಯ ಮತ್ತು ರಾಜ್ಯ ಚಾರ್ಟರ್ಡ್ ಬ್ಯಾಂಕುಗಳು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಾಣಿಜ್ಯ ವ್ಯವಹಾರಕ್ಕೆ ಸಾಲ ಕೊಡುತ್ತವೆ. ಇವು ದೊಡ್ಡ ಗ್ರಾಹಕರ ಅಗತ್ಯಗಳನ್ನು ಪೂರೈಸುತ್ತವೆ. ಇವುಗಳಲ್ಲದೆ ಸ್ಥಳೀಯ ಜನರ ವೈಯಕ್ತಿಕ ಉಳಿತಾಯ, ಠೇವಣಿ ಮತ್ತು ಸಾಲಗಳ ಅಗತ್ಯವನ್ನು ಪೂರೈಸುವ ಅನೇಕ ಸಣ್ಣ ಬ್ಯಾಂಕುಗಳು ಇವೆ. ಉಳಿತಾಯ ಬ್ಯಾಂಕ್ ಮತ್ತು ಸಾಲ ಕೊಡುವ ಸಂಘಗಳು ಸಾಮಾನ್ಯ ಜನರ ಬ್ಯಾಂಕಿಂಗ್ ಅಗತ್ಯಗಳನ್ನು ಪೂರೈಸುತ್ತವೆ. ಇವುಗಳ ಪ್ರಮುಖ ವ್ಯವಹಾರವೆಂದರೆ ಅನುಭೋಗ ಸಾಲ ಮತ್ತು ಅಡಮಾನ ಸಾಲ ನೀಡುವುದಾಗಿದೆ. ಮನೆ ಖರೀದಿ, ಕಾರು ಖರೀದಿ ಮುಂತಾದವುಗಳಿಗೆ ಈ ಬ್ಯಾಂಕುಗಳು ಸಾಲ ನೀಡುತ್ತವೆ.

ದೊಡ್ಡ ದೊಡ್ಡ ಕಂಪನಿಗಳು ಮತ್ತು ಸಂಸ್ಥೆಗಳು ತಮ್ಮ ಉದ್ಯೋಗಿಗಳಿಗೆ ಬ್ಯಾಂಕಿಂಗ್ ಸೌಲಭ್ಯ ನೀಡಲು ಉದರಿ ಸಂಘಗಳನ್ನು (Credit Unions) ನಡೆಸುತ್ತವೆ.

## ಫೆಡರಲ್ ರಿಸರ್ವ್ ಬ್ಯಾಂಕ್ ವ್ಯವಸ್ಥೆ

ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಬ್ಯಾಂಕುಗಳು ಫೆಡರಲ್ ರಿಸರ್ವ್ ಬ್ಯಾಂಕ್ ನಿಯಂತ್ರಣಕ್ಕೊಳಪಟ್ಟಿವೆ. ಫೆಡರಲ್ ರಿಸರ್ವ್ ಬೋರ್ಡ್ ಎಂಬ ಮಂಡಳಿ ಇಡೀ ದೇಶದ ಆರ್ಥಿಕ ವ್ಯವಸ್ಥೆಯ ಮೇಲ್ವಿಚಾರಣೆ ಮಾಡುತ್ತದೆ. ಈ ವ್ಯವಸ್ಥೆಯಲ್ಲಿ 13 ಫೆಡರಲ್ ರಿಸರ್ವ್ ಬ್ಯಾಂಕುಗಳಿದ್ದು ಫೆಡರಲ್ ರಿಸರ್ವ್ ಬೋರ್ಡಿನ ಮೇಲ್ವಿಚಾರಣೆಯಲ್ಲಿ ಒಂದು ಪರಿಪೂರ್ಣ ಕೇಂದ್ರೀಯ ಬ್ಯಾಂಕಿನ ಹಾಗೆಯೇ ಇವು ಕಾರ್ಯ ನಿರ್ವಹಿಸುತ್ತವೆ. ಇವುಗಳಿಗೆ ಫೆಡರಲ್ ರಿಸರ್ವ್ ಬೋರ್ಡ್ ಆರ್ಥಿಕ ನೀತಿ ನಿರೂಪಣೆಯ ಮಾರ್ಗದರ್ಶನವನ್ನು ನೀಡುತ್ತದೆ. ಈ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿರುವ ರಾಜ್ಯಗಳಲ್ಲಿ ಇರುವ ವಾಣಿಜ್ಯ ಬ್ಯಾಂಕುಗಳು ಮತ್ತು ಉದರಿ ಸಂಘಗಳು ಹೊಸ ಶಾಖೆಯನ್ನು ತೆರೆಯಬೇಕಾದರೆ ಸಂಬಂಧಪಟ್ಟ ಫೆಡರಲ್ ರಿಸರ್ವ್ ಬ್ಯಾಂಕಿನ ಪರವಾನಗಿ ತೆಗೆದುಕೊಳ್ಳಬೇಕಾಗುತ್ತದೆ. ಫೆಡರಲ್ ರಿಸರ್ವ್ ಬೋರ್ಡ್ ಸರಕಾರದ ಎಲ್ಲಾ ನೀತಿ ನಿರೂಪಣೆ ಸಂಸ್ಥೆಗಳ ನಿಕಟ ಸಂಪರ್ಕವನ್ನಿಟ್ಟುಕೊಂಡಿರುತ್ತದೆ. ಫೆಡರಲ್ ರಿಸರ್ವ್ ಬ್ಯಾಂಕುಗಳ ಒಟ್ಟಾರೆ ಆರ್ಥಿಕ ನೀತಿ ನಿರ್ಧಾರ ಕಾರ್ಯವನ್ನು ಫೆಡರಲ್ ಓಪನ್ ಮಾರ್ಕೆಟ್ ಸಮಿತಿ ಎಂಬ ಸಮಿತಿ ನಿರ್ವಹಿಸುತ್ತದೆ. ಈ ಸಮಿತಿಯಲ್ಲಿ ಫೆಡರಲ್ ರಿಸರ್ವ್ ಬೋರ್ಡಿನ ಸದಸ್ಯರು ಹಾಗೂ ಫೆಡರಲ್ ರಿಸರ್ವ್ ಬ್ಯಾಂಕುಗಳ ಅಧ್ಯಕ್ಷರುಗಳು ಸದಸ್ಯರಾಗಿರುತ್ತಾರೆ.

**ಎಚ್. ವೆಂಕಟರಾವ್**
ಮೈಸೂರು ಬ್ಯಾಂಕ್
ಬಳ್ಳಾರಿ ಶಾಖೆ, ಬಳ್ಳಾರಿ

## ಠೇವಣಿ ವಿಮಾ ಯೋಜನೆ

ಅಮೆರಿಕದಲ್ಲಿ ಸಣ್ಣ ಬ್ಯಾಂಕುಗಳ ಸಂಖ್ಯೆ ಹೆಚ್ಚು. ಅನೇಕ ಬ್ಯಾಂಕುಗಳು ಹಿಂದೆ ದಿವಾಳಿ ತೆಗೆದಿದ್ದುಂಟು. ಬ್ಯಾಂಕ್ ಠೇವಣಿದಾರರ ಹಿತರಕ್ಷಣೆಗಾಗಿ 1934ರಲ್ಲಿ ಫೆಡರಲ್ ಠೇವಣಿ ವಿಮಾ ನಿಗಮವನ್ನು (Federal Deposit Insurance Corporation) ಸ್ಥಾಪಿಸಲಾಯಿತು. ಈ ನಿಗಮ ಪ್ರತಿ ಖಾತೆಗೂ ಒಂದು ಲಕ್ಷ ಡಾಲರುಗಳ ವರೆಗೆ ಖಾತರಿಯನ್ನು ಕೊಡುತ್ತದೆ. ಸುಮಾರು 14,000 ವಾಣಿಜ್ಯ ಮತ್ತು ಉಳಿತಾಯ ಬ್ಯಾಂಕುಗಳು ಈ ನಿಗಮದ ಸದಸ್ಯ ಬ್ಯಾಂಕುಗಳಾಗಿವೆ. ಫೆಡರಲ್ ಉಳಿತಾಯ ಮತ್ತು ಸಾಲ ವಿಮಾ ನಿಗಮ (The Federal Savings and Loan Insurance Corporation) ಮತ್ತು ರಾಷ್ಟ್ರೀಯ ಉದರಿ ಸಂಘ ಷೇರು ವಿಮಾ ನಿಧಿ (The national Credit Union Share Insurance Fund)—ಈ ಎರಡು ಸಂಸ್ಥೆಗಳು ಉಳಿತಾಯ ಮತ್ತು ಸಾಲ ಸಂಘಗಳಲ್ಲಿ ಹಾಗೂ ಉದರಿ ಸಂಘಗಳಲ್ಲಿರುವ ಠೇವಣಿಗಳಿಗೆ ಪ್ರತಿ ಖಾತೆಗೂ ಒಂದು ಲಕ್ಷ ಡಾಲರುಗಳ ವರೆಗೆ ಖಾತರಿ ಕೊಡುತ್ತವೆ. ಪ್ರತಿಯೊಂದು ಬ್ಯಾಂಕು ಅಥವಾ ಉದರಿ ಸಂಘ ಈ ನಿಗಮಗಳ ಸದಸ್ಯತ್ವ ಹೊಂದಬೇಕೆಂಬ ಕಡ್ಡಾಯವಿಲ್ಲ. ಆದ್ದರಿಂದ ಇವುಗಳ ಸದಸ್ಯತ್ವವನ್ನು ಹೊಂದಿಲ್ಲದ ಬ್ಯಾಂಕುಗಳ ಗ್ರಾಹಕರು ಆ ಬ್ಯಾಂಕುಗಳು ಅಥವಾ ಉದರಿ ಸಂಘಗಳು ಮುಳುಗಿದಲ್ಲಿ ತಮ್ಮ ಠೇವಣಿ ಕಳೆದುಕೊಳ್ಳುವ ಸಾಧ್ಯತೆ ಇದೆ.

[16ನೆಯ ಪುಟ ನೋಡಿ]

# ಗ್ರಾಮೀಣ ಸಾಲ ವಸೂಲಿ: ಕೆಲವು ಚಿಂತನೆಗಳು

**ಸಾಲವನು ಕೊಂಬಾಗ ಹಾಲೋಗರುಂಡಂತೆ, ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ ಎಂಬ ಸರ್ವಜ್ಞ ವಚನ ಈಗ ಸುಳ್ಳಾಗುತ್ತಿದೆ. ಸಾಲಿಗ ಸಾಲವನ್ನು ವಸೂಲು ಮಾಡುವುದೇ ಈಗ ಕಿಬ್ಬದಿಯ ಕೀಲು ಮುರಿದುಕೊಳ್ಳುವಷ್ಟು ಕಷ್ಟವಾದ್ದು.**

ಸಾಲವನ್ನು ಕೊಡುವುದು ಬ್ಯಾಂಕುಗಳ ಕರ್ತವ್ಯವಾದಂತೆ, ಸಾಲವನ್ನು ಮರುಪಾವತಿ ಮಾಡುವುದು ಸಾಲಪಡೆದವರ ಕರ್ತವ್ಯ. ಆದರೆ ಪರಿಪೂರ್ಣ ಮರುಪಾವತಿ ಅಪೂರ್ವ; ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ವಿಚಾರಗಳ ಅರಿವು ಇಲ್ಲದಿರುವುದರಿಂದ ಸಮಯಕ್ಕೆ ಸರಿಯಾಗಿ ಮರುಪಾವತಿಯಾಗದೆ ಇರಬಹುದು; ಇದಕ್ಕೆ ವಿರುದ್ಧವಾಗಿ ಜನರಿಗೆ ಬ್ಯಾಂಕುಗಳ 'ತಿಳಿವಳಿಕೆ' ಜಾಸ್ತಿಯಾದಂತೆ, ಉದ್ದೇಶಪೂರ್ವಕ ಸುಸ್ತಿ ಹೆಚ್ಚುತ್ತಿದೆ. ಕೆಲವು ಸಂದರ್ಭಗಳಲ್ಲಿ ಬ್ಯಾಂಕುಗಳಿಗೆ ಪುನರ್ಧನ ದೊರೆತರೂ ಆ ನೆರವನ್ನು ಬ್ಯಾಂಕುಗಳು ಹಿಂತಿರುಗಿಸಬೇಕಾಗಿರುವುದರಿಂದ, ಸಾಲಪಡೆದವನು ಮರುಪಾವತಿ ಮಾಡುವುದೇ ಮುಖ್ಯವಾದ ಆಧಾರವಾಗಿದೆ. ಸಾಲಮೇಳಗಳು ಸಾಮಾನ್ಯವಾದ ಸಂಗತಿಯಾಗಿರುವ ಈ ದಿನಗಳಲ್ಲಿ ಸಾಲಗಳ ಮರುಪಾವತಿಗೆ ಇನ್ನಿಲ್ಲದ ಪ್ರಾಮುಖ್ಯ ಬರುತ್ತಲಿದೆ.

## ಸಾಲ ಸುಸ್ತಿಯ ಕಾರಣಗಳು

ಸಾಲವೊಂದನ್ನು ನೀಡಲು ಹಲವಾರು ವಿಚಾರಗಳನ್ನು ಬ್ಯಾಂಕುಗಳು ಪರಿಶೀಲಿಸಬೇಕಾಗುತ್ತದೆ. ಸಾಲದ ಪ್ರಸ್ತಾಪ ಮುಂದಿಡಲ್ಪಟ್ಟಾಗ ಅದನ್ನು ಕೂಲಂಕಷವಾಗಿ ಪರಿಶೀಲಿಸಿ, ಉದ್ದೇಶದ ತಥ್ಯತೆ, ಸಾಲ ಪಡೆಯುವವನ ಪ್ರಾಮಾಣಿಕತೆ, ಮರುಪಾವತಿಯ ಸಾಧ್ಯತೆ, ಯೋಜನೆಗೆ ಬೇಕಾಗಬಹುದಾದ ಮೊತ್ತ, ಮರುಪಾವತಿಯ ಅವಧಿ ಇತ್ಯಾದಿ ಹಲವು ವಿಚಾರಗಳನ್ನು ಬ್ಯಾಂಕ್ ಅಧಿಕಾರಿಗಳು ಪರಿಶೀಲಿಸಬೇಕಾಗುತ್ತದೆ. ಕೆಲವು ಬಾರಿ ಇಂತಹ ಪರಿಶೀಲನೆ ನಡೆಯದಿದ್ದಾಗ ಸಾಲದ ದುರುಪಯೋಗವಾಗಿ, ಮರುಪಾವತಿ ಕಷ್ಟಸಾಧ್ಯ. ಈಗಿನ ಸಾಲಮೇಳಗಳಲ್ಲಿ ನೀಡಿದ ಸಾಲಗಳಿಗೆ ಈ ಮಾತು ಹೆಚ್ಚು ಅನ್ವಯವಾಗುತ್ತದೆ. ರಾಜಕಾರಣಿಗಳು ಸೂಚಿಸುವ ನೂರಾರು ಜನರಿಗೆ ಕಿರು ಅವಧಿಯಲ್ಲಿ ಕಡ್ಡಾಯವಾಗಿ ಸಾಲ ನೀಡಬೇಕಾಗಿರುವ ಬ್ಯಾಂಕ್ ಅಧಿಕಾರಿಗಳಿಂದ ಪೂರ್ಣಪ್ರಮಾಣದ ಪರಿಶೀಲನೆ ಅಸಾಧ್ಯ. ಸುಸ್ತಿ ಸಾಲಗಳಿಗೆ ಇಂತಹ ಲೋಪದೋಷಗಳು ಮುಖ್ಯವಾಗುತ್ತವೆ.

ಸರ್ಕಾರ ಸೂಚಿಸುವ ಸಾಲ ಪ್ರಸ್ತಾಪಗಳು ತತ್ವದಲ್ಲಿ ಗಟ್ಟಿಯಾಗಿದ್ದರೂ ಪ್ರಾಯೋಗಿಕವಾಗಿ ಟೊಳ್ಳಾಗಿರುವುದು ವಾಸ್ತವವಾಗಿರುವಾಗ, ಅಂತಹ ಸಾಲಗಳ ಮರುಪಾವತಿಯೂ ಕಷ್ಟದಲ್ಲಿದೆ.

## ಪ್ರಸ್ತುತ ವಸೂಲಿ ವ್ಯವಸ್ಥೆ

ಸುಸ್ತಿ ಸಾಲಗಳು ಖಾತೆಯಲ್ಲಿ ಮುಂದುವರಿದಾಗ, ಸಾಲ ಪಡೆದವನ ಮನವೊಲಿಸಿ ವಸೂಲಿಗೆ ಪ್ರಯತ್ನಿಸುವ ಯತ್ನ ವಿಫಲವಾದಾಗ, ನ್ಯಾಯಾಲಯಕ್ಕೆ ಮೊರೆ ಹೊಗುವುದು ಮಾತ್ರ ಬ್ಯಾಂಕಿಗೆ ಉಳಿದಿರುವ ದಾರಿ. ಆದರೆ ನ್ಯಾಯಾಲಯದಲ್ಲಿ ದಾವೆ ಇತ್ಯರ್ಥವಾಗುವುದು ಬಹಳ ನಿಧಾನದ ಕ್ರಿಯೆಯಾಗಿರುತ್ತದೆ. ಇದರಿಂದ ಬ್ಯಾಂಕರ್ ತುಂಬ ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಮೊದಲನೆಯದಾಗಿ, ಸಾಲ ಪಡೆದವನು ನೀಡಿರುವ ತಗಾದೆ ಪತ್ರಗಳು ಚಾಲ್ತಿಯಲ್ಲಿರಬೇಕು. ಬ್ಯಾಂಕು ಮತ್ತು ಸಾಲ ಪಡೆದವನ ಮಧ್ಯೆ ಸ್ನೇಹಪರ ಬಾಂಧವ್ಯ ಇಲ್ಲದಿದ್ದರೆ, ಸಾಲ ಪಡೆದವನು ಸಾಲದ ಪುನರುಜ್ಜೀವನ ಪತ್ರಕ್ಕೆ ಸಹಿ ಹಾಕದೆ ಬ್ಯಾಂಕಿಗೆ ತೊಂದರೆ ಕೊಡುವ ಸಾಧ್ಯತೆ ಇರುತ್ತದೆ.

ಬ್ಯಾಂಕು ಸಾಲದ ವಸೂಲಿಗಾಗಿ ನ್ಯಾಯಾಲಯದಲ್ಲಿ ದಾವೆ ಹೂಡಿದಾಗ, ಅದಕ್ಕೆ ಪ್ರತಿಯಾಗಿ ಸಾಲವನ್ನೇ ಮನ್ನಾ ಮಾಡಬೇಕೆಂದು ಸಾಲ ಪಡೆದವನು ವಾದಿಸುವುದೂ ಇದೆ. ಕೆಲವು ತಾಂತ್ರಿಕ ಕಾರಣಗಳಿಂದಾಗಿ ಅವರಿಗೆ ಜಯ ದೊರೆಯಲೂಬಹುದು. ಇಂಗ್ಲಿಷ್ ಬರದ ಸಾಲಿಗ ತನಗೆ ಆ ಭಾಷೆ ಬರುವುದಿಲ್ಲವೆಂಬ ವಾದವನ್ನು ಮುಂದೊಡ್ಡಿ, ಇಂಗ್ಲಿಷ್ ಮುದ್ರಿತ ನಮೂನೆಗಳಿಗೆ ಸಹಿ ಮಾಡಿಸಿಕೊಂಡು ವಿಚಾರಗಳನ್ನು ವಿವರಿಸದೆ ಬ್ಯಾಂಕಿನವರು ಮೋಸ ಮಾಡಿದರೆಂದು ವಾದಿಸಲೂಬಹುದು. ಬ್ಯಾಂಕಿನ ವ್ಯವಹಾರಗಳಲ್ಲಿ ಪ್ರಾದೇಶಿಕ ಭಾಷೆಯ ಪೂರ್ಣಬಳಕೆ ಅನಿವಾರ್ಯವಾಗುವುದೆಂಬುದನ್ನು ಇಂತಹ ಪ್ರಕರಣಗಳು ಎತ್ತಿಹಿಡಿಯುತ್ತವೆ. ಕಾಲಕಾಲಕ್ಕೆ ಬದಲಾಗುವ ರಿಸರ್ವ್‌ಬ್ಯಾಂಕ್ ನಿಯಂತ್ರಿತ ಬಡ್ಡಿದರಗಳಿಗೆ ತನ್ನ ಜವಾಬ್ದಾರಿಯಿಲ್ಲ ಮತ್ತು ಆ ವಿಚಾರವನ್ನು ತನಗೆ ತಿಳಿಸಲಿಲ್ಲವೆಂದು ಸಾಲಿಗ ವಾದಿಸಬಹುದು. ಬಡ್ಡಿ ದರ ಜಾಸ್ತಿಯೆಂದು ಸಹ ಆತ ವಾದಿಸಬಹುದು. ಮರುಪಾವತಿಯನ್ನು ಮುಂದೂಡುವ ಉದ್ದೇಶದಿಂದಲೇ ಸಾಲ ಪಡೆದವನು ನ್ಯಾಯಾಲಯದಲ್ಲಿ ಕೊಕ್ಕೆ ಹಾಕಿ ಕೂರಬಹುದು. ಈ ಮಧ್ಯೆ ಸಾಕಷ್ಟು ಕಾಲ ಸರಿದು ಹೋಗಿದ್ದು, ಆ ಸಮಯದಲ್ಲಿ ಸಾಲಕ್ಕೆ ಆಧಾರವಾಗಿದ್ದ ಆಸ್ತಿಯನ್ನೇ ಸಾಲ ಪಡೆದವನು ಮಾರಲು ಸಾಧ್ಯವಾಗಬಹುದು. ಈ ಮಧ್ಯೆ ಸಂಬಂಧಪಟ್ಟ ದಾಖಲೆ ಪತ್ರಗಳು ವಾಯಿದೆ ಮೀರಿದವಾದಾಗಲೂ ದಾವೆ ಬ್ಯಾಂಕಿಗೆ ವ್ಯತಿರಿಕ್ತವಾಗಿ ಬರಬಹುದು.

ಎಲ್ಲ ವಿಚಾರಗಳೂ ಸರಿಯಾಗಿದ್ದು, ತನ್ನ ಪರವಾದ ತೀರ್ಪನ್ನು ಬ್ಯಾಂಕು ಪಡೆದರೂ, ಅದನ್ನು ಜಾರಿಗೆ ತರಲು ಬ್ಯಾಂಕು ಪುನಃ ನ್ಯಾಯಾಲಯದ ಅನುಮತಿಯನ್ನು ಪಡೆಯಬೇಕಾಗುತ್ತದೆ. ಸಾಲದ ವಜಾಕ್ಕಾಗಿ ಆಸ್ತಿಯನ್ನು ಮಾರಲಾಗುತ್ತಿದೆಯೆಂದು ತಿಳಿದಾಗ, ಸಾಲಪಡೆದವನ ಮತ್ತು ಖರೀದಿಸುವವರ ಒಳಸಂಚಿನಿಂದಾಗಿ, ಆಸ್ತಿಯನ್ನು ಖರೀದಿಸಲು ಯಾರೂ ಮುಂದೆ ಬರದಿರಬಹುದು. ಅಥವಾ ತೀರ ಕಡಿಮೆ ದರಕ್ಕೆ ಆಸ್ತಿಯ ಖರೀದಿ ಪ್ರಸ್ತಾಪ ಬಂದು, ಅದರಿಂದ ಸಾಲವೇ ತೀರದಿರುವ ಸಂದರ್ಭ ಉಂಟಾಗಬಹುದು.

ಈಗ ಚಾಲ್ತಿಯಲ್ಲಿರುವ ಸಾಲ ವಸೂಲಿ ವಿಧಾನಗಳ ವೈಫಲ್ಯಗಳು ಇದರಿಂದ ತಿಳಿಯುತ್ತವೆ. ಉದ್ದೇಶಪೂರ್ವಕವಾಗಿ ಸಾಲಕ್ಕೆ ಮರುಪಾವತಿ ಮಾಡದೆ ವಂಚಿಸುವ ಹಲವಾರು ಪ್ರಯತ್ನಗಳು ಸಫಲವಾಗುವ ಸಾಧ್ಯತೆಗಳು ಈಗಿನ ವ್ಯವಸ್ಥೆಯಲ್ಲಿ ಬಹಳ ಇವೆ. ಸಾರ್ವಜನಿಕರ ಹಣ ದುರುಪಯೋಗವಾಗದಂತೆ ತಡೆಯಲು ವಸೂಲಿ ವಿಧಾನಗಳನ್ನು ಇನ್ನೂ ಕಠಿಣಗೊಳಿಸುವ ಆವಶ್ಯಕತೆ ಇದೆ.

## ವಸೂಲಿಯನ್ನು ಉತ್ತಮಪಡಿಸಲು ಕೆಲವು ಸಲಹೆಗಳು

ಸಾಲವನ್ನು ಸರ್ಕಾರಕ್ಕೆ ಬರಬೇಕಾಗಿರುವ ಬಾಕಿ ಎಂದು ಪರಿಗಣಿಸಿ, ಆದಾಯ ತೆರಿಗೆ ಅಥವಾ

**ಮು. ಶಶಿಧರ**
ಮೈಸೂರು ಬ್ಯಾಂಕು
ಕಣಕಟ್ಟೆ 573 144

ಮಾರಾಟ ತೆರಿಗೆಯನ್ನು ವಸೂಲು ಮಾಡಲು ಬಳಸುವ ತೀವ್ರ ಮತ್ತು ಕಠಿಣವಾದ ವಿಧಾನಗಳನ್ನು ಬ್ಯಾಂಕ್ ಸಾಲ ವಸೂಲಿಗೂ ಬಳಸುವ ಕುರಿತು ವಿಚಾರ ಮಾಡಬೇಕಾಗಿದೆ. ಸಾಲಕ್ಕೆ ಆಧಾರವಾಗಿ ಕೊಟ್ಟ ಆಸ್ತಿಯನ್ನು ಮಾರಲು ಸಾಲಗಾರನಿಗೆ ಅವಕಾಶ ಸಿಗುವ ಮುಂಚೆಯೇ ಅದನ್ನು ವಿಲೇವಾರಿ ಮಾಡಿ ತನ್ನ ಸಾಲಕ್ಕೆ ಹಾಕಿಕೊಳ್ಳಲು ಬ್ಯಾಂಕಿಗೆ ಅಧಿಕಾರ ಕೊಟ್ಟರೆ, ಉದ್ದೇಶಪೂರ್ವಕ ಸುಸ್ತಿದಾರಿಕೆಯನ್ನು ಹದ್ದುಬಸ್ತಿನಲ್ಲಿಡಬಹುದು.

ಸಾಲವನ್ನು ಮಂಜೂರು ಮಾಡುವಾಗ ಸಾಲ ಪಡೆಯುವವನ ಪ್ರಾಮಾಣಿಕತೆ ಮತ್ತು ಪ್ರಸ್ತಾಪದ ಪರಿಶೀಲನೆ ಸರಿಯಾಗಿ ನಡೆದಿದ್ದರೆ, ಸಾಲದ ವಸೂಲಿ ಕಷ್ಟವಾಗಲಾರದು. ಆದ್ದರಿಂದ ಸಾಲದ ಪ್ರಸ್ತಾಪಗಳನ್ನು ವಿವರವಾಗಿ ಪರಿಶೀಲಿಸುವ ಬ್ಯಾಂಕುಗಳ ಕೆಲಸವನ್ನು ಅವಸರಗೊಳಿಸುವ ಅಥವಾ ಕಾಲಾವಕಾಶವನ್ನು ಮೊಟಕುಗೊಳಿಸುವ ಒತ್ತಡವನ್ನು ಎಂದೂ ತರಬಾರದು. ರಾಜಕೀಯ ಉದ್ದೇಶದ ಸಾಲಗಳ ಹಂಚಿಕೆ ಇಂತಹ ಪರಿಶೀಲನೆಗೆ ಅವಕಾಶ ಕೊಡುತ್ತಲಿಲ್ಲ. ಬಡಜನರನ್ನು ಉದ್ಧಾರ ಮಾಡಬೇಕೆಂಬ ಸರ್ಕಾರದ ಆಶಯ ಉದಾತ್ತವಾದುದೇ. ಆದರೆ ಸಾಲವೆಂಬ ಹೆಸರಿನಲ್ಲಿ ಹಣ ಹಂಚಲು ಬ್ಯಾಂಕನ್ನು ದುರುಪಯೋಗ ಮಾಡಿಕೊಂಡಾಗ, ಸಾಲದ ಪರಿಕಲ್ಪನೆಯೇ ಬದಲಾಗತೊಡಗುತ್ತದೆ. ಬಡಜನರಿಗೆ ಮತ್ತು ಅನುಕೂಲವಾದ ರಾಜಕೀಯ ಬೆಂಬಲಿಗರಿಗೆ ಹಣವನ್ನು ಹಂಚಲು ಬ್ಯಾಂಕುಗಳೇ ಬೇಕಾಗಿಲ್ಲ. ಅದನ್ನು ನೇರವಾಗಿ ಸರ್ಕಾರವೇ ಮಾಡಬಹುದು. ತೀರ ಕಡಿಮೆ ಅವಧಿಯಲ್ಲಿ ನೂರಾರು ಸಾಲಗಳನ್ನು ನೀಡಬೇಕೆಂದು ಒತ್ತಾಯಿಸುವಾಗ ತಕ್ಕಷ್ಟು ಸಿಬ್ಬಂದಿ ಇದ್ದು, ಸಾಲ ಪ್ರಸ್ತಾಪಗಳ ಪರಿಶೀಲನೆ ನಡೆಯುವುದನ್ನು ಖಾತರಿಪಡಿಸಿಕೊಳ್ಳಬೇಕು. ಒಂದೇ ಪ್ರದೇಶದಲ್ಲಿ ನೂರಾರು ಹಸುಗಳನ್ನು ಅಥವಾ ಕುರಿಗಳನ್ನು ಕೊಳ್ಳಲು ಸಾಲ ನೀಡುವಾಗ, ವೈದ್ಯಕೀಯ ಸೌಲಭ್ಯ, ಮೇವು ಮೊದಲಾದವು ದೊರೆಯುವವೆಂದು ಖಾತರಿಪಡಿಸಿಕೊಳ್ಳಬೇಕು. ಅಪಾತ್ರರಿಗೆ ಸಾಲ ನೀಡುವಂತೆ ರಾಜಕೀಯ ಪಕ್ಷಗಳು ಬ್ಯಾಂಕನ್ನು ಒತ್ತಾಯಿಸಬಾರದು.

ಸಾಲ ವಸೂಲಿಗೆ ಬ್ಯಾಂಕುಗಳು ನ್ಯಾಯಾಲಯಕ್ಕೆ ಮೊರೆಹೊಗುವ ಈಗಿನ ವಿಧಾನದಲ್ಲಿ ಇರುವ ಲೋಪದೋಷಗಳನ್ನು ಸರಿಪಡಿಸಿ, ಇಡೀ ಕ್ರಿಯೆಯನ್ನು ಸರಳಗೊಳಿಸಬೇಕು. ಸಾಲಕ್ಕೆ ಸಂಬಂಧಿಸಿದ ದಾವೆಗಳನ್ನು ಒಂದೆರಡು ತಿಂಗಳುಗಳಲ್ಲಿ ಖಂಡಿತವಾಗಿ ಇತ್ಯರ್ಥಗೊಳಿಸುವ ವ್ಯವಸ್ಥೆಯನ್ನು ಸ್ಥಾಪಿಸಬೇಕು. ಇದಕ್ಕಾಗಿಯೇ ಜಿಲ್ಲಾ ಮಟ್ಟಗಳಲ್ಲಿ ಪ್ರತ್ಯೇಕ ನ್ಯಾಯಾಲಯವನ್ನು ಸ್ಥಾಪಿಸುವ ವಿಚಾರವನ್ನು ಪರಿಶೀಲಿಸಬೇಕು.

ಕೆಲವು ಸರಕಾರಗಳು ಆಗಿಂದಾಗ್ಗೆ ಸಾಲವನ್ನು ಅಥವಾ ಬಡ್ಡಿಯನ್ನು ಮನ್ನಾಮಾಡುವ ಪರಿಪಾಠವನ್ನು ಬೆಳೆಸಿಕೊಂಡಿವೆ. ಇದರಿಂದ ಸಾಲಗಾರರಲ್ಲಿ ಮರುಪಾವತಿ ಮಾಡುವ ಶಕ್ತಿಯಿದ್ದರೂ, ಮನ್ನಾ ಆಗಬಹುದೆಂಬ ಆಶೆಯಿಂದ ಮರುಪಾವತಿಯನ್ನೇ ನಿಲ್ಲಿಸಿ, ಸಾಲದ ಕಲ್ಪನೆಯನ್ನೇ ಹುಸಿಮಾಡುವ ಸಾಧ್ಯತೆ ಇರುತ್ತದೆ. ಸಾಲಗಳ ಮನ್ನಾ ಮಾಡುವಿಕೆಯೇ ಇರಬಾರದು.

ಕೊಟ್ಟ ಸಾಲಗಳು ಕಾಲಕ್ಕೆ ಸರಿಯಾಗಿ ವಸೂಲಿಯಾಗುವುದು ಬ್ಯಾಂಕುಗಳ ಮತ್ತು ದೇಶದ ಆರ್ಥಿಕ ಹಿತಾಸಕ್ತಿಯಿಂದ ಬಹು ಮುಖ್ಯ. ಇದಕ್ಕಾಗಿ ಸಾಲ ವಸೂಲಿಯ ಕುರಿತು ಹೆಚ್ಚಿನ ಚಿಂತನೆಗಳಾಗಬೇಕಾದುದು ಮುಖ್ಯ. ●

---

# ಅಮೆರಿಕದ ಬ್ಯಾಂಕಿಂಗ್ ವ್ಯವಸ್ಥೆ

[14ನೆಯ ಪುಟದಿಂದ ಮುಂದುವರಿದುದು]

## ಬಡ್ಡಿ ದರದ ಸಂರಚನೆ

ಅಮೆರಿಕದಲ್ಲಿ ಚಲ ಬಡ್ಡಿದರ ವ್ಯವಸ್ಥೆ ಇದೆ. ಬ್ಯಾಂಕ್ ಉದರಿಗೆ ಬೇಡಿಕೆ ಹೆಚ್ಚಾದಾಗ ಸಾಲದ ಮೇಲಿನ ಬಡ್ಡಿ ದರಗಳು ಹೆಚ್ಚಾಗುವುವು. ಬ್ಯಾಂಕ್ ಉದರಿಗೆ ಬೇಡಿಕೆ ತಗ್ಗಿದಾಗ ಮುಂಗಡಗಳ ಮೇಲಿನ ಬಡ್ಡಿ ದರಗಳು ಕಡಿಮೆಯಾಗುತ್ತವೆ. ಠೇವಣಿಗಳ ಮೇಲಿನ ಬಡ್ಡಿ ದರಗಳು ಇದೇ ರೀತಿ ಬದಲಾಗುತ್ತಿರುತ್ತವೆ.

## ಗಣಕೀಕರಣ

ಬ್ಯಾಂಕಿಂಗ್ ವ್ಯವಹಾರಗಳು ಹೆಚ್ಚಿದುದರಿಂದ ಹಾಗೂ ಗ್ರಾಹಕರ ಸೇವೆಯ ಗುಣಮಟ್ಟವನ್ನು ಕಾಯ್ದುಕೊಳ್ಳಲು ಮತ್ತು ಉತ್ತಮಗೊಳಿಸಲು ಬ್ಯಾಂಕುಗಳು ಗಣಕಗಳನ್ನು ಉಪಯೋಗಿಸುತ್ತವೆ.

ಯಾಂತ್ರೀಕರಣದಿಂದ ಮತ್ತು ಮುಂದುವರಿದ ಸಂಪರ್ಕ ವ್ಯವಸ್ಥೆಯಿಂದ ಬ್ಯಾಂಕುಗಳು ಖಾತೆದಾರರಿಗೆ ಅತ್ಯುತ್ತಮ ಸೇವೆ ಸಲ್ಲಿಸಲು ಸಾಧುವಾಗಿದೆ. ಅತ್ಯಂತ ಕಡಿಮೆ ಮತ್ತು ಸರಳ ನಿಯಮ್ಯಗಳ ಹಾಗೂ ಸರಳ ವಿಧಾನಗಳ ಬಳಕೆಯಿಂದ ಕಡಿಮೆ ಕಾಗದಗಳ ಸೃಷ್ಟಿ. (ಕೆಲವು ಸಲ ದೂರವಾಣಿಗಳ ಮೂಲಕ ವ್ಯವಹಾರಗಳು ಇತ್ಯರ್ಥ) ಹಾಗೂ ಕಂಪ್ಯೂಟರುಗಳ ಮೂಲಕ ಕೇಂದ್ರೀಕೃತ ಲೆಕ್ಕ ಪದ್ಧತಿಯನ್ನು ಅನುಸರಿಸಲಾಗುತ್ತದೆ. ಎಪ್ಪತ್ತರ ದಶಕದ ಆದಿಭಾಗದಲ್ಲಿ ಚೆಕ್ಕುಗಳಿಗೆ ಅಗ್ಗದ ಪರ್ಯಾಯವಾಗಿ ಉದರಿ ಕಾರ್ಡುಗಳ ಬಳಕೆಯನ್ನು ಬ್ಯಾಂಕುಗಳು ಜಾರಿಗೆ ತಂದುವು. ಅನೇಕ ಗ್ರಾಹಕರು ಉದರಿ ಕಾರ್ಡುಗಳನ್ನು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಬಳಸುತ್ತಾರೆ. ಗ್ರಾಹಕರಿಗೆ ವಾರದ ಎಲ್ಲಾ ದಿನಗಳಲ್ಲೂ, ದಿನದ 24 ಘಂಟೆಗಳಲ್ಲಿ, ಒಂದು ಮಿತಿಯೊಳಗೆ ಬ್ಯಾಂಕಿಂಗ್ ಸೌಲಭ್ಯ ದೊರೆಯುವ ವ್ಯವಸ್ಥೆ ಇದೆ. ಈ ಉದ್ದೇಶಕ್ಕಾಗಿ ಬ್ಯಾಂಕಿನ ಹೊರಗೆ ಮತ್ತು ಅಂಗಡಿ ಸಮುಚ್ಚಯಗಳಲ್ಲಿ ಸ್ವಯಂಚಲಿ ಷರಾಫ್ ಯಂತ್ರಗಳನ್ನು (Automatic teller machines) ಸ್ಥಾಪಿಸಲಾಗಿದೆ. ವ್ಯವಹಾರಗಳನ್ನು ಗಣಕೀಕರಿಸುವುದರಿಂದ ಖಾತೆಗಳ ತಃಖ್ತೆಯನ್ನು ಕಾಲಕ್ಕೆ ಸರಿಯಾಗಿ ತಯಾರಿಸುವುದು ಸುಲಭವಾಗಿದೆ. ನಗದು ವಹಿವಾಟುಗಳು ತುಂಬಾ ಕಡಿಮೆ. ದೊಡ್ಡ ಮೊಬಲಗಿನ ಚೆಕ್ಕುಗಳ ಪಾವತಿಯನ್ನು ತ್ವರಿತಗೊಳಿಸಲು ತೀರುವೆ ಮನೆಯ ಸ್ವತಶ್ಚಲಿ ಪಾವತಿ ಪದ್ಧತಿ (Clearing house automated Payment System) ವ್ಯವಸ್ಥೆ ಇದೆ. ಈ ವ್ಯವಸ್ಥೆಯಲ್ಲಿ ಸದಸ್ಯ ಬ್ಯಾಂಕುಗಳ ನಿಧಿಗಳನ್ನು ಕಂಪ್ಯೂಟರ್ ಜಾಲದ ಮೂಲಕ ಅಂದಂದೇ ವರ್ಗಾಯಿಸಲು ಸಾಧ್ಯವಾಗಿದೆ. ಆಧುನಿಕ ತಂತ್ರಜ್ಞಾನದ ಬಳಕೆಯಿಂದ ಬ್ಯಾಂಕುಗಳು ತಮ್ಮ ವಹಿವಾಟನ್ನು ಅಚ್ಚುಕಟ್ಟಾಗಿ ನಿರ್ವಹಿಸಲು ಸಾಧ್ಯವಾಗಿದೆ. ಗ್ರಾಹಕರಿಗೆ ಉತ್ತಮ ಸೇವಾ ಸೌಲಭ್ಯವನ್ನು ಒದಗಿಸುವುದರಲ್ಲಿ ಸಫಲವಾಗಿದ್ದು, ಅಧಿಕ ಉತ್ಪಾದಕತೆ ಮತ್ತು ಅಧಿಕ ಲಾಭವನ್ನು ಗಳಿಸುವುದರಲ್ಲಿ ಯಶಸ್ವಿಯಾಗಿವೆ. ●

# ಗುಣಮಟ್ಟ ವಲಯ

**ಉದ್ಯೋಗಿಗಳು ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ತಂತಮ್ಮ ಕಾರ್ಯ ನಿರ್ವಹಣೆಯ ಮಟ್ಟದಲ್ಲಿ ಸಮಿತಿಗಳನ್ನು ರಚಿಸಿಕೊಂಡು ಆಗಾಗ್ಗೆ ಕಲೆತು ಸಮಾಲೋಚನೆ ನಡೆಸಿ ಆಡಳಿತವರ್ಗದೊಂದಿಗೆ ಸಹಕರಿಸಿ ಗುಣಮಟ್ಟವನ್ನು ಹೆಚ್ಚಿಸುವ ಜಪಾನೀ ಪರಿಕಲ್ಪನೆ ನಮ್ಮ ದೇಶಕ್ಕೆ ಎಷ್ಟರ ಮಟ್ಟಿಗೆ ಅನ್ವಯವಾದೀತು?**

'ಶ್ರೀ......ಅವರೆ ಉತ್ಪಾದನ ವಿಧಾನ ಸುಧಾರಿಸಲು ನೀವು ನೀಡಿದ್ದ ಸಲಹೆಯನ್ನು ಆಡಳಿತವರ್ಗ ಒಪ್ಪಿದೆ. ಇದಕ್ಕಾಗಿ ನಿಮಗೆ ಪ್ರಶಸ್ತಿಯೂ ಲಭಿಸಿದೆ. ಅಭಿನಂದನೆಗಳು.' ದೊಡ್ಡ ಕಂಪನಿಯ ಮುಖ್ಯಸ್ಥನೊಬ್ಬ ಕೆಳಗಿನ ಸ್ತರದ ಕುಶಲ ಕಾರ್ಮಿಕನನ್ನು ಉದ್ದೇಶಿಸಿಇಂಥ ಮಾತುಗಳನ್ನಾಡುವುದುಜಪಾನ್, ಅಮೆರಿಕಾದಂಥ ಕೈಗಾರಿಕಾ ದೇಶಗಳಲ್ಲಿ ಸರ್ವೇಸಾಮಾನ್ಯ.ಉದ್ಯೋಗಿಯ ಪ್ರತಿಭೆಗೂ ಮನ್ನಣೆಯ ಮಣೆ ನೀಡಬೇಕಾದ ಔಚಿತ್ಯ, ಅಗತ್ಯಗಳನ್ನು ಆ ದೇಶಗಳು ಬಹಳ ಹಿಂದೆಯೇ ಗ್ರಹಿಸಿದ್ದುವು. ಭಾರತದ ಹಲವು ಕಂಪನಿಗಳಲ್ಲೂ ಈ ರೀತಿ ಉದ್ಯೋಗಿ ಸಲಹಾ ಯೋಜನೆ ಜಾರಿಯಲ್ಲಿದೆ.

ಮುಂದೆ ಉದ್ಯೋಗಿಗಳನ್ನು ಆಡಳಿತದಲ್ಲಿ ಹೆಚ್ಚು ಹೆಚ್ಚು ತೊಡಗಿಸಲು ಅನುಕೂಲವಾಗುವಂತೆ ಭಾಗೀದಾರಿ ವ್ಯವಸ್ಥಾಪನದ (Participative Management) ಆಲೋಚನೆಯನ್ನು ಕಾರ್ಯರೂಪಕ್ಕೆ ತರಲಾಯಿತು. ಉದ್ಯೋಗಿಗಳ ಪ್ರತಿನಿಧಿಗಳಿಗೆ ಆಡಳಿತ ಮಂಡಳಿಯಲ್ಲಿ ಪ್ರಾತಿನಿಧ್ಯ ನೀಡಿದುದರಿಂದ ಕೈಗಾರಿಕಾ ಬಾಂಧವ್ಯ ಸುಧಾರಿಸಿತು.

ಉದ್ಯೋಗಿ ಸಲಹಾ ಯೋಜನೆ, ಆಡಳಿತ ಮಂಡಳಿಯಲ್ಲಿ, ಪ್ರಾತಿನಿಧ್ಯ ಮುಂದುವರಿದ ದೇಶಗಳಪ್ರಯೋಗಶೀಲತೆ ಇಲ್ಲಿಗೇ ನಿಲ್ಲಲಿಲ್ಲ. ಉದ್ಯೋಗಿಗಳನ್ನು ಕೇವಲ ಕೆಲಸ ಮಾಡುವ ಯಂತ್ರಗಳು ಎಂದಷ್ಟೇ ಭಾವಿಸದೆ, ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಅವರೂ ಭಾಗಿಗಳು ಎನ್ನುವ ಭಾವನೆ ಬೇರೂರಿಸಲು ಸತತವಾದ ಪ್ರಯತ್ನಗಳು ನಡೆಯುತ್ತಲೇ ಹೋದುವು.

## ಗುಣಮಟ್ಟ ವಲಯದ ಉಗಮ

ಗುಣಮಟ್ಟ ವಲಯದ (ಕ್ವಾಲಿಟಿ ಸರ್ಕಲ್) ಸ್ಥಾಪನೆ ಸುಧಾರಣೆಯ ನಿಟ್ಟಿನಲ್ಲಿಮತ್ತೊಂದುಹೆಜ್ಜೆಯೆನಿಸಿತು. ಮಾನವ ಸಂಪನ್ಮೂಲ ಅಭಿವೃದ್ಧಿಯ ವಿಷಯದಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿರುವ ಜಪಾನ್ ದೇಶವೇ ಗುಣಮಟ್ಟ ವಲಯದ ಪರಿಕಲ್ಪನೆಗೂ ಜನ್ಮ ನೀಡಿದೆ. ಗುಣಮಟ್ಟ ವಲಯವೆಂದರೆ ಉದ್ಯೋಗಿಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿ, ಅಂದರೆ ತಂತಮ್ಮ ವಿಭಾಗ, ಕಾರ್ಯಾಗಾರದ ಮಟ್ಟದಲ್ಲಿ, ಸಮಿತಿಗಳನ್ನು ರಚಿಸಿಕೊಳ್ಳುವುದು. ಈ ಸಮಿತಿಗಳು ಆಗಾಗ್ಗೆ ಕಲೆತು ಚರ್ಚಿಸಿ ಉತ್ಪಾದನ ವಿಧಾನದಲ್ಲಿ ಸುಧಾರಣೆಗಳು, ಲೋಪದೋಷಗಳು ಮುಂತಾದುವನ್ನು ಚರ್ಚಿಸಿ ಆಡಳಿತ ವರ್ಗಕ್ಕೆ ಸಲಹೆಗಳನ್ನು ನೀಡುತ್ತದೆ. ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಗೆ ಆಡಳಿತವರ್ಗದ ಇಂಥ ಸಮಿತಿಗಳಿಂದ ಬಹಳ ಅನುಕೂಲವಾಗುತ್ತದೆ. ಸಾಮಾನ್ಯವಾಗಿ ಕಂಪನಿಗಳಲ್ಲಿ ತೀರ್ಮಾನಗಳು ಮೇಲಿನ ಆಡಳಿತ ವರ್ಗದಲ್ಲೇ ಕೇಂದ್ರೀಕೃತವಾಗಿರುವುದರಿಂದ, ಅದನ್ನು ಕೆಲಸಗಾರರ ಮಟ್ಟಕ್ಕೂ ವಿಕೇಂದ್ರೀಕರಿಸುವುದೇ ಗುಣಮಟ್ಟ ವಲಯದ ಪ್ರಧಾನ ಉದ್ದೇಶವಾಗಿದೆ.

ಉದ್ಯೋಗಿಗಳು ತಮ್ಮ ಕಾರ್ಯಪರಿಸರದಲ್ಲಿ ತಲೆಹಾಕುವ ಸಮಸ್ಯೆಗಳನ್ನು ತಮ್ಮತಮ್ಮಲ್ಲೇ ಚರ್ಚೆಯ ಮೂಲಕ ಪರಿಹರಿಸಿಕೊಳ್ಳುವುದರಿಂದ ಪರಸ್ಪರ ಅರಿವು ಹೆಚ್ಚುತ್ತದೆ. ತಮ್ಮ ಅನಿಸಿಕೆಗಳಿಗೂ ಬೆಲೆ ಇದೆ ಎಂಬ ಆತ್ಮವಿಶ್ವಾಸ ಉದ್ಯೋಗಿಗಳಲ್ಲಿ ಮೂಡುತ್ತದೆ. ಸಂಘಶಕ್ತಿಯ ಮಹತ್ವವನ್ನೂ ಪರಿಚಯಮಾಡಿಕೊಡುತ್ತದೆ. ಸಂಸ್ಥೆಗೆ ಪರಿಪೂರ್ಣ ವ್ಯವಸ್ಥಾಪನ ಸಿದ್ಧಾಂತವೊಂದನ್ನು ಒದಗಿಸುತ್ತದೆ.

## ಬ್ಯಾಂಕುಗಳಲ್ಲಿ ಗುಣಮಟ್ಟ ವಲಯ

ಗುಣಮಟ್ಟ ವಲಯದ ಪರಿಕಲ್ಪನೆ ಆರಂಭವಾದದ್ದು ಕಾರ್ಖಾನೆಗಳಲ್ಲಿ. ಉತ್ಪಾದಿತ ವಸ್ತುಗಳ ಗುಣಮಟ್ಟವನ್ನು ಸುಧಾರಿಸಲು ಗುಣಮಟ್ಟ ನಿಯಂತ್ರಣ ವಲಯಗಳು (ಕ್ವಾಲಿಟಿ ಕಂಟ್ರೋಲ್ ಸರ್ಕಲ್) ಸ್ಥಾಪಿತವಾದುವು. ಆದರೆ 'ನಿಯಂತ್ರಣ' ಎಂಬ ಪದದ ಬಗ್ಗೆ ಕಾರ್ಮಿಕ ವರ್ಗಕ್ಕೆ ಉಂಟಾದ ಅಪನಂಬಿಕೆ, ಹಿಂಜರಿಕೆ ದೂರ ಮಾಡಲು 'ಗುಣಮಟ್ಟ ವಲಯ' ಎಂಬ ಹೆಸರನ್ನು ಉಳಿಸಿಕೊಳ್ಳಲಾಯಿತು. ಉತ್ಪನ್ನದ ಗುಣಮಟ್ಟವನ್ನಾಗಲಿ, ಸಂಖ್ಯೆಯನ್ನಾಗಲಿ ಕಾರ್ಖಾನೆಗಳಲ್ಲಿ ನಿರ್ದಿಷ್ಟ ಮಾನದಂಡದಿಂದ ಅಳೆಯಲು ಸಾಧ್ಯ. ಆದರೆ ಬ್ಯಾಂಕುಗಳಲ್ಲಿ ಗುಣಮಟ್ಟ ವಲಯದ ಬಗ್ಗೆ ಆಲೋಚಿಸಿದರೆ ಹಲವಾರು ತೊಡಕುಗಳು ಎದುರಾಗುತ್ತವೆ.

1 ಬ್ಯಾಂಕುಗಳಲ್ಲಿ ಉತ್ಪಾದಿತವಾಗುವ ವಸ್ತುವೆಂದರೆ 'ಸೇವೆ' ಮತ್ತು ಸೇವೆ ಒಂದೇ. ಅದನ್ನು ನಿರ್ದಿಷ್ಟ ಮಾನದಂಡಗಳಿಂದ ಅಳೆಯಲಾಗದು.

2 ಬ್ಯಾಂಕುಗಳ ಆಡಳಿತ ಬಹುಮಟ್ಟಿಗೆ ವಿಕೇಂದ್ರೀಕೃತ ವ್ಯವಸ್ಥೆ. ಗುಣಮಟ್ಟ ವಲಯ ಶಾಖಾಮಟ್ಟದಲ್ಲಿ ಕೆಲಸ ನಿರ್ವಹಿಸಿದರೆ, ತೀರ್ಮಾನ ತೆಗೆದುಕೊಳ್ಳುವ ಆಡಳಿತ ಕಛೇರಿ ಎಲ್ಲೋ ದೂರ ಇರುತ್ತದೆ. ಆದರೆ ಬಹುಪಾಲು ಕಾರ್ಖಾನೆಗಳಲ್ಲಿ ಎಲ್ಲ ಒಂದೇ ಸೂರಿನಡಿ ಇರುತ್ತದೆ.

3 ಬ್ಯಾಂಕುಗಳಲ್ಲಿ ಶಾಖಾ ಮಟ್ಟದಲ್ಲಿ ವರ್ಗಾವರ್ಗಿ ಬಹಳ ಹೆಚ್ಚು. ಇದರಿಂದ ಗುಣಮಟ್ಟ ವಲಯ ಸಮಿತಿಯ ಸದಸ್ಯತ್ವದಲ್ಲೂ ಬದಲಾವಣೆ ಹೆಚ್ಚು. ಸದಸ್ಯತ್ವಕ್ಕೆ ಸೇರಲು ಯಾವುದೇ ನಿರ್ಬಂಧವಿಲ್ಲ. ಹಾಗಾಗಿ ಗುಣಮಟ್ಟ ವಲಯದಲ್ಲಿ ಸ್ಥಿರತೆ ಕಾಣಲು ಕಷ್ಟಸಾಧ್ಯ.

4 ಕಾರ್ಖಾನೆಗಳಲ್ಲಿ ಗುಣಮಟ್ಟ ವಲಯವೆಂದರೆ ಉದ್ಯೋಗಿ/ಕಾರ್ಮಿಕರು ರೂಪಿಸಿಕೊಂಡ ಬೇಡಿಕೆ. ಅಲ್ಲಿ ಮೇಲಧಿಕಾರಿಗಳಿಗೆ ಪ್ರವೇಶವಿಲ್ಲ. ಇಬ್ಬರ ಕರ್ತವ್ಯಗಳೂ ನಿರ್ದಿಷ್ಟವಾಗಿ ರೂಪುಗೊಂಡಿರುತ್ತದೆ. ಆದರೆ ಬ್ಯಾಂಕುಗಳಲ್ಲಿ ಕಾರ್ಯವಿಧಾನ ಉದ್ಯೋಗಿ, ಅಧಿಕಾರಿ, ವ್ಯವಸ್ಥಾಪಕ ವರ್ಗ ಈ ಮೂರೂ ಸ್ತರಗಳಲ್ಲಿ ಪರಸ್ಪರ ಹೆಣೆದುಕೊಂಡಿರುತ್ತದೆ. ಸಣ್ಣ ಶಾಖೆಯಲ್ಲಿ ಒಬ್ಬ ಉದ್ಯೋಗಿ ಹಲವಾರು ವಿಭಾಗಗಳ ಕೆಲಸ ನಿರ್ವಹಿಸಬೇಕಾಗುತ್ತದೆ. ಒಂದೊಂದು ವಿಭಾಗಕ್ಕೂ ಒಂದೊಂದು ಗುಣಮಟ್ಟ ವಲಯ ಸ್ಥಾಪಿಸಬೇಕಾಗುತ್ತದೆ. ಇದೂ ಒಂದು ಸಮಸ್ಯೆ.

ಆದ್ದರಿಂದ ಬ್ಯಾಂಕುಗಳಲ್ಲಿ ಗುಣಮಟ್ಟ ವಲಯ ರಚಿಸುವಾಗ ಈ ತೊಡಕುಗಳನ್ನು ಗಮನದಲ್ಲಿರಿಸಿಕೊಂಡು ನಿರ್ದಿಷ್ಟ ಕಾರ್ಯಕ್ರಮ ರೂಪಿಸಿಕೊಳ್ಳಬೇಕು.

## ಬ್ಯಾಂಕುಗಳಲ್ಲಿ ಅನುಷ್ಠಾನ ಹೇಗೆ?

ವ್ಯವಸ್ಥಾಪನೆ: ಮೇಲಿನ ವ್ಯವಸ್ಥಾಪಕವರ್ಗ ಮೊದಲ ಹೆಜ್ಜೆಯಾಗಿ ಉದ್ಯೋಗಿಗಳು ನೀಡುವ ಸಲಹೆಯನ್ನು ರಚನಾತ್ಮಕವಾಗಿ ಪರಿಶೀಲಿಸಬೇಕು. ಉನ್ನತವ್ಯವಸ್ಥಾಪಕವರ್ಗ ಮತ್ತು ಉದ್ಯೋಗಿಗಳು

[18ನೆಯ ಪುಟ ನೋಡಿ

**ಕೆ. ಎನ್. ಮಹಾಬಲ**
ಭಾರತೀಯ ಸ್ಟೇಟ್ ಬ್ಯಾಂಕ್
ಬನಶಂಕರಿ ಎರಡನೆ ಹಂತ
ಬೆಂಗಳೂರು 560 070

# ಗುತ್ತಿಗೆ ಕಂಪನಿಗಳು

**ಈಚೆಗೆ ಭಾರತದಲ್ಲಿ ಹುಟ್ಟಿಕೊಂಡು ಬೆಳೆಯುತ್ತಿರುವ ಗುತ್ತಿಗೆ ಕಂಪನಿಗಳು ಒಂದು ದೃಷ್ಟಿಯಲ್ಲಿ ಬ್ಯಾಂಕುಗಳೊಂದಿಗೆ ಸ್ಪರ್ಧೆ ನಡಸುತ್ತಿವೆ, ಇನ್ನೊಂದು ದೃಷ್ಟಿಯಲ್ಲಿ ಅವಕ್ಕೆ ಪೂರಕವಾಗಿವೆ. ಬ್ಯಾಂಕುಗಳೂ ಈ ವ್ಯವಹಾರದಲ್ಲಿ ಆಸಕ್ತಿ ತಳೆಯುತ್ತಿವೆ.**

**ಮ. ಮ. ಗೋಖಲೆ**
ಮೈಸೂರು ಬ್ಯಾಂಕ್
ಮೈಸೂರು ಮುಖ್ಯ ಶಾಖೆ

ಈಚಿನ ವರ್ಷಗಳಲ್ಲಿ ಬ್ಯಾಂಕುಗಳಿಗೆ ಸ್ಪರ್ಧಿಗಳಾಗಿ ಹಾಗೂ ಪೂರಕ ಸಂಸ್ಥೆಗಳಾಗಿ ಅನೇಕ ರೀತಿಯ ಹಣಕಾಸು ಸಂಸ್ಥೆಗಳು ಭಾರತೀಯ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಪ್ರಾರಂಭವಾಗುತ್ತಿವೆ, ಸ್ಥಾಪನೆಯಾಗಿವೆ. ಇವುಗಳಲ್ಲಿ ಚಿಟ್ ಫಂಡ್ ಯಾ ಚೀಟಿ ವ್ಯವಹಾರದ ಸಂಸ್ಥೆಗಳು, ಖಾಸಗಿ ಹಾಗೂ ಸರ್ಕಾರಿ ಕಂಪನಿಗಳು, ಹಣಕಾಸು ಕಾರ್ಪೊರೇಷನ್ನುಗಳು ಮತ್ತು ಗುತ್ತಿಗೆ ಕಂಪನಿಗಳು ಮುಖ್ಯವಾಗಿವೆ. ಈ ಸಂಸ್ಥೆಗಳು ಬ್ಯಾಂಕುಗಳ ಮೂಲತತ್ತ್ವವಾದ 'ಠೇವಣಿ ಹಾಗೂ ಸಾಲ' ವ್ಯವಹಾರದ ಜತೆಗೆ ಇತರ ಸಂಬಂಧಪಟ್ಟ ವ್ಯವಹಾರಗಳನ್ನೂ ಮಾಡುತ್ತಿವೆ. ಕೇಂದ್ರಸರ್ಕಾರದ ಕೆಲವು ಸಡಿಲವಾದ ನೀತಿ ನಿಯಮಾವಳಿಗಳಿಂದ ಬ್ಯಾಂಕೇತರ ಸಂಸ್ಥೆಗಳ ಕಡೆಗೆ ಜನರ ಒಲವು ಜಾಸ್ತಿ

## ಗುಣಮಟ್ಟ ವಲಯ

[17ನೆಯ ಪುಟದಿಂದ ಮುಂದುವರಿದಿದೆ]

—ಇವರಿಬ್ಬರ ನಡುವೆ ಕಾರ್ಯನಿರ್ವಹಿಸಬೇಕಾಗಿರುವ ಮಧ್ಯಮ ವ್ಯವಸ್ಥಾಪಕ ವರ್ಗಕ್ಕೆ ಗುಣಮಟ್ಟ ವಲಯದ ಬಗ್ಗೆ ಸ್ಪಷ್ಟ ತಿಳಿವಳಿಕೆಯನ್ನು ನೀಡಬೇಕು. ಏಕೆಂದರೆ ಗುಣಮಟ್ಟ ವಲಯದ ಸ್ಥಾಪನೆಯಿಂದ ಮಧ್ಯಮವ್ಯವಸ್ಥಾಪಕವರ್ಗದ ಲೋಷದೋಷಗಳು ಮೇಲಿನ ವ್ಯವಸ್ಥಾಪಕವರ್ಗಕ್ಕೆ ನೇರವಾಗಿ ತಿಳಿಯುತ್ತವೆಂಬ ಅಳುಕು ಇರುತ್ತದೆ. ಅದು ದೂರವಾಗಬೇಕು. ಗುಣಮಟ್ಟ ವಲಯದ ಸ್ಥಾಪನೆ ಅವರಿಗೆ ದೈನಂದಿನ ಸಮಸ್ಯೆಗಳಿಂದ ಬಿಡುವು ದೊರಕಿಸುತ್ತದೆ. ಆ ಬಿಡುವನ್ನು ಸಂಸ್ಥೆಯ ರಚನಾತ್ಮಕ ಕಾರ್ಯಗಳಿಗೆ ಅವರು ಬಳಸಿಕೊಳ್ಳಬಹುದು.

ಕಾರ್ಮಿಕ ಸಂಘ : ಗುಣಮಟ್ಟ ವಲಯದಲ್ಲಿ ಪಾಲ್ಗೊಳ್ಳುವಿಕೆ ಐಚ್ಛಿಕವಾದುದು. ಇದು ಯಾವುದೇ ಕಾರ್ಮಿಕ ಸಂಘದ ವಿರೋಧಿ ಅಲ್ಲ ಎಂದು ಉದ್ಯೋಗಿಗಳಿಗೆ ಮನವರಿಕೆ ಮಾಡಿಕೊಡುವುದೂ ಮುಖ್ಯ. ಗುಣಮಟ್ಟ ವಲಯದ ಉದ್ದೇಶ ಉದ್ಯೋಗಿಗಳ 'ಕಾರ್ಯ ಸಂಸ್ಕೃತಿ'ಯ ಉತ್ತೇಜನ ಮಾತ್ರ. ವೇತನ ವಿಮರ್ಶೆ, ಕುಂದುಕೊರತೆಗಳು, ಬಡ್ತಿ, ವರ್ಗಾವಣೆ ಮುಂತಾದ ಸಮಸ್ಯೆಗಳನ್ನು ಮುಂದೆಯೂ ಕಾರ್ಮಿಕ ಸಂಘಗಳೇ ನಿರ್ವಹಿಸುತ್ತವೆ ಎಂಬುದನ್ನೂ ದೃಢಪಡಿಸಬೇಕು.

ಆರಂಭದಲ್ಲಿ ಸಣ್ಣದಾದ, ಅಂದರೆ ಸುಲಭವಾಗಿ ಪರಿಹರಿಸಬಹುದಾದ ಸಮಸ್ಯೆಯೊಂದನ್ನು ಎತ್ತಿಕೊಳ್ಳುವುದು ಒಳ್ಳೆಯದು. ಇದರಿಂದ ಸಮಸ್ಯೆಯ ಪರಿಹಾರ, ಮತ್ತು ಅದರ ಅನುಷ್ಠಾನ ಎಲ್ಲರಲ್ಲೂ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ತರಬೇತಿ : ಗುಣಮಟ್ಟ ವಲಯದ ಚಟುವಟಿಕೆಗೆ ಸಂಬಂಧಿಸಿದ ಎಲ್ಲರೂ, ಅಂದರೆ ಮೇಲ್ವಿಚಾರಕರು, ವ್ಯವಸ್ಥಾಪಕರು, ಉದ್ಯೋಗಿಗಳು, ವಿಶೇಷ ತರಬೇತಿಯನ್ನು ಪಡೆಯುವುದೂ ಉಪಯುಕ್ತ. ಈ ತರಬೇತಿಯಲ್ಲಿ ಗುಂಪು ಚಲನಶೀಲತೆ (ಗ್ರೂಪ್ ಡೈನಮಿಕ್ಸ್), ನಾಯಕತ್ವಗುಣ, ಸಮಸ್ಯಾಪರಿಹಾರ ಮುಂತಾದ ವಿಶಿಷ್ಟ ಅಂಶಗಳು ಅಡಕವಾಗಿರಬೇಕು.

ಸಂಯೋಜನೆ : ವಿವಿಧ ಶಾಖೆ/ಬ್ಯಾಂಕುಗಳಲ್ಲಿ ಕ್ರಿಯಾಶೀಲವಾಗಿರುವ ಗುಣಮಟ್ಟ ವಲಯದ ಚಟುವಟಿಕೆಗಳನ್ನು ಸಂಯೋಜಿಸುವುದೂ ಅಷ್ಟೇ ಮುಖ್ಯವಾದುದು. ದೇಶಾದ್ಯಂತ ಇಂಥ ಸಂಯೋಜನೆ ಕಷ್ಟಕರವಾದುದು. ಆದರೆ ಒಂದು ನಗರ/ವಲಯ ಮಟ್ಟದಲ್ಲಿ ಮಾದರಿ ಸಮೀಕ್ಷೆ ನಡೆಸಬಹುದು. ಗುಣಮಟ್ಟ ವಲಯದ ಕಾರ್ಯದ ಪರಿಶೀಲನೆ, ಪರ್ಯಾವರ್ತನೆ ಸಂಸ್ಥೆಗೆ ಅನೇಕ ರೀತಿಯಲ್ಲಿ ನೆರವಾಗಬಲ್ಲದು. ಬ್ಯಾಂಕಿನ ಧ್ಯೇಯೋದ್ದೇಶಗಳು, ಗ್ರಾಹಕ ದೃಷ್ಟಿಕೋನ, ಸ್ಪರ್ಧಾತ್ಮಕ ಸ್ಥಿತಿ, ಮಾನವ ಸಂಪನ್ಮೂಲದ ಉತ್ತಮ ಬಳಕೆ, ವೆಚ್ಚ-ಅನುಕೂಲ ಅಧ್ಯಯನ ಮುಂತಾದ ಅಂಶಗಳನ್ನು ವಿಶ್ಲೇಷಿಸುವುದು ಇದರಿಂದ ಸಾಧ್ಯವಾಗುತ್ತದೆ.

ಅಡ್ಡಿ ಆತಂಕಗಳು : ಭಾರತದಂತಹ ಸಂಕೀರ್ಣ ದೇಶದಲ್ಲಿ ಗುಣಮಟ್ಟ ವಲಯದ ಪರಿಕಲ್ಪನೆಯನ್ನು ಬೇರೂರಿಸುವಾಗ ಹಲವಾರು ತೊಡಕುಗಳು ಎದುರಾಗುತ್ತದೆ.

1 ಕಾರ್ಮಿಕ ಮನೋಭಾವ : ಜಪಾನ್ ದೇಶದಲ್ಲಿ ಗುಣಮಟ್ಟ ವಲಯದ ಪರಿಕಲ್ಪನೆ ಯಶಸ್ಸು ಕಂಡಿರುವುದು ನಿಜವಾದರೂ ಜಪಾನಿ ಕಾರ್ಮಿಕನ ಉಳಿಗಮಾನ್ಯ ಮನೋಭಾವಕ್ಕೂ ಭಾರತೀಯ ಕಾರ್ಮಿಕನ ಪ್ರಜಾಪ್ರಭುತ್ವವಾದಿ ಮನೋಭಾವಕ್ಕೂ ಬಹಳ ಅಂತರವಿರುವುದನ್ನು ಗಮನಿಸಲೇಬೇಕು. 'ಗುಣಮಟ್ಟ ವಲಯ'ವೆಂದರೆ ಉದ್ಯೋಗಿಗಳನ್ನು ಕಾರ್ಮಿಕ ಸಂಘದ ವಿರುದ್ಧ ಎತ್ತಿಕಟ್ಟುವ ಆಡಳಿತ ವರ್ಗದ ಯತ್ನ ಎಂಬ ಭೀತಿ ದೂರವಾಗಬೇಕು.

2 ಸಮರ್ಪಣ ಮನೋಭಾವ : ಮತ್ತೊಮ್ಮೆ ಜಪಾನ್ ಕಾರ್ಮಿಕನೊಡನೆ ಹೋಲಿಸಿದಾಗ ಭಾರತದ ಕಾರ್ಮಿಕರಲ್ಲಿ ಹಲವಾರು ವ್ಯತ್ಯಾಸಗಳಿವೆ. ಜಪಾನ್‌ನಲ್ಲಿ ಶಿಕ್ಷಣಕ್ಕೂ ಉದ್ಯೋಗಕ್ಕೂ ಬೇರ್ಪಡಿಸಲಾಗದ ಸಂಬಂಧವಿದೆ. ಇದರಿಂದ ಉದ್ಯೋಗಿ ಸಂಸ್ಥೆಗೆ ತನ್ನನ್ನು ತಾನೇ ಸಮರ್ಪಿಸಿಕೊಳ್ಳಲು ಸಾಧ್ಯ. ಆದರೆ ಭಾರತದಲ್ಲಿ ಹಾಗಿಲ್ಲ. ಒಬ್ಬ ವಿಜ್ಞಾನದ ವಿದ್ಯಾರ್ಥಿ ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಬ್ಯಾಂಕ್ ಕೆಲಸಕ್ಕೆ ಸೇರಿದರೆ ಉದ್ಯೋಗದ ಅತೃಪ್ತಿಯ ಬಲೆಯನ್ನು ಕಿತ್ತು ಹೊರಬಂದು ಸಂಸ್ಥೆಗೆ ಅರ್ಪಿಸಿಕೊಳ್ಳಲು ಅವನಿಗೆ ಹಲವಾರು ವರ್ಷಗಳೇ ಬೇಕಾಗುತ್ತವೆ.

3 ಯಾಂತ್ರಿಕ ದೃಷ್ಟಿ : ಮತ್ತೊಂದು ಅಂಜಿಕೆಯೆಂದರೆ ಗುಣಮಟ್ಟ ವಲಯದ ಫಲಿತಾಂಶಗಳಿಗೆ ಸಂಬಂಧಿಸಿದುದು. ಇದರ ಕಾರ್ಯಕಲಾಪಗಳು ಈಗಿರುವ ಹಲವಾರು ಸಮಿತಿಗಳಂತೆ (ಗ್ರಾಹಕ ಸಮಿತಿ, ಗ್ರಾಹಕ ಸಮಾಲೋಚನಾ ಸಭೆ ಇತ್ಯಾದಿ) ಮಾಮೂಲೀ ಕಲಾಪವಾಗುವ ಅಪಾಯವೂ ಇದ್ದೇ ಇದೆ.

ವಿಫಲತೆ : 'ಗುಣಮಟ್ಟ ವಲಯ' ಸ್ಥಾಪಿತವಾಗಿ ಯಾವುದೇ ಕಾರಣಕ್ಕೆ ಸೋಲನ್ನು ಅನುಭವಿಸಿದರೆ ಅದರ ಪರಿಣಾಮಗಳೂ ಗಂಭೀರವಾದವು. ಕೈಗಾರಿಕಾ ಬಾಂಧವ್ಯದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತವೆ. ಪರಸ್ಪರ ದೋಷಾರೋಪಣೆಯೂ ನಡೆಯಬಹುದು.

ಇಷ್ಟೆಲ್ಲ ತೊಡಕುಗಳಿದ್ದರೂ ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಒಳ್ಳೆಯ ಪಾತ್ರ ವಹಿಸಬಲ್ಲ ಗುಣಮಟ್ಟ ವಲಯದ ಬಗ್ಗೆ ಆಶಾದಾಯಕ ಅಭಿಪ್ರಾಯ ಹೊಂದಲು ಸಾಧ್ಯ. 1980ರಲ್ಲಿ ಜಪಾನಿನ ಫ್ಯೂಜಿ ಬ್ಯಾಂಕ್ ತನ್ನ ಅನೇಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಗುಣಮಟ್ಟ ವಲಯ ನೆರವಾಯಿತು. ಇಂಥ ಉತ್ತೇಜನಕರ ಬೆಳವಣಿಗೆಯಿಂದ ಸ್ಫೂರ್ತಿಗೊಂಡು ಮುನ್ನಡೆದರೂ 'ಗುಣಮಟ್ಟ ವಲಯ' ಭಾರತದಂಥ ದೇಶದಲ್ಲೂ ಯಶಸ್ಸು ಕಂಡೀತು. ●

ಯಾಗಿ, 'ಕೇವಲ ಸಾಲಕ್ಕಾಗಿ ಬ್ಯಾಂಕ್' ಎಂಬ ಪರಿಪಾಟಿ ಜನರಲ್ಲಿ ಬೆಳೆಯುತ್ತಿರುವುದು ಬ್ಯಾಂಕ್ ತಜ್ಞರು ಚಿಂತಿಸಬೇಕಾದ ವಿಷಯ.

ಈ ಲೇಖನದಲ್ಲಿ ಬ್ಯಾಂಕುಗಳ ಮೂಲತತ್ತ್ವವನ್ನೇ ಆಧರಿಸಿ, ಬ್ಯಾಂಕುಗಳಿಗೆ ಪೂರಕವಾಗಿ, ಬ್ಯಾಂಕಿನ ಸಹ ಸಂಸ್ಥೆಗಳಾಗಿ ಬೆಳೆದು ಜನಪ್ರಿಯವಾಗುತ್ತಿರುವ 'ಲೀಸಿಂಗ್ ಕಂಪನಿ' ಹಾಗೂ ಅದರ ವ್ಯವಹಾರಕ್ಕೆ ಸಂಬಂಧಿಸಿದ ಕೆಲವು ಅಂಶಗಳನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

## ವ್ಯವಹಾರದ ಸ್ವರೂಪ

'ಲೀಸಿಂಗ್' ಎಂಬುದಕ್ಕೆ ಕನ್ನಡದಲ್ಲಿ 'ಗುತ್ತಿಗೆ' ಎಂಬ ಅರ್ಥ ಇದೆ. ಕೆಲವು ಕಡೆ ಇದನ್ನು 'ಭೋಗ್ಯ' ಎಂಬ ಹೆಸರಲ್ಲಿ ಕರೆಯುತ್ತಾರೆ. ಗುತ್ತಿಗೆ ವ್ಯವಹಾರದಲ್ಲಿ ಗುತ್ತಿಗೆದಾರ (Lessee) ಗುತ್ತಿಗೆದಾತನಿಂದ (Lessor) ಒಂದು ಒಪ್ಪಂದದ ಮೇಲೆ ಬಂದು ಸ್ಥಿರಾಸ್ತಿ ಯಾ ಚರಾಸ್ತಿಯ ಹಕ್ಕನ್ನು ಪಡೆಯುತ್ತಾನೆ. ಈ ಒಪ್ಪಂದದ ಪ್ರಕಾರ ನಿಗದಿಪಡಿಸಿದ ಬಾಡಿಗೆಯನ್ನು (Lease Rent) ನಿಗದಿತ ಅವಧಿಯಲ್ಲಿ ಕೊಡುತ್ತಿರುತ್ತಾನೆ. ಆಸ್ತಿಯ ಸಂಪೂರ್ಣ ಒಡೆತನ ಗುತ್ತಿಗೆದಾತನದ್ದೇ ಆಗಿದ್ದು ಕೇವಲ ಅದನ್ನು ಉಪಯೋಗಿಸುವ ಯಾ ಭೋಗಿಸುವ ಹಕ್ಕು ಮಾತ್ರ ಗುತ್ತಿಗೆದಾರನದ್ದಾಗಿರುತ್ತದೆ. ಇದೇ ರೀತಿಯ ಇನ್ನೊಂದು ವಿಧಾನವಾದ 'ಬಾಡಿಗೆ ಕೊಳ್ಳಿಕೆ'ಯಲ್ಲಿ (Hire-Purchase System) ಸಂಪೂರ್ಣ ಕಂತು ಹಣ ಪಾವತಿಯಾದ ಮೇಲೆ ವ್ಯಕ್ತಿಗೆ ಆಸ್ತಿಯ ಒಡೆತನ ವರ್ಗಾವಣೆ ಹೊಂದುತ್ತದೆ.

ನಮ್ಮ ದೇಶದಲ್ಲಿ ಗುತ್ತಿಗೆ ಪದ್ಧತಿ ಒಂದು ಅಥವಾ ಇನ್ನೊಂದು ರೀತಿಯಲ್ಲಿ ಹಲವಾರು ವರ್ಷಗಳಿಂದ ಬಳಕೆಯಲ್ಲಿದೆ. ಬಲು ಹಿಂದಿನ ಕಾಲದಲ್ಲಿ ಹಳ್ಳಿಗಳಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಕೃಷಿ ಭೂಮಿ, ಎತ್ತು, ಎತ್ತಿನ ಗಾಡಿಗಳನ್ನು ಗುತ್ತಿಗೆಯ ಮೇಲೆ ಬಳಸುವ ಪದ್ಧತಿ ಇತ್ತು. ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲಿ ಈಗಲೂ ಈ ಬಳಕೆ ಜಾರಿಯಲ್ಲಿದೆ. ಅಂತೆಯೇ ನಗರ ಪ್ರದೇಶದಲ್ಲಿ ಮನೆ, ಭೂಮಿ, ಕಛೇರಿ, ಕಾರ್ಖಾನೆ, ಪೀಠೋಪಕರಣಗಳಲ್ಲದೆ ಅನೇಕ ಬಳಕೆಯ ಸರಂಜಾಮುಗಳನ್ನು ಗುತ್ತಿಗೆ ರೀತಿಯಲ್ಲಿ ಪಡೆದು ಉಪಯೋಗಿಸುವುದನ್ನು ನಾವು ಕಾಣುತ್ತೇವೆ. ನಮ್ಮ ದೇಶದಲ್ಲಿ ದೂರವಾಣಿ ವ್ಯವಸ್ಥೆ ಇದಕ್ಕೊಂದು ಉತ್ತಮ ಉದಾಹರಣೆ. ಈ ವ್ಯವಸ್ಥೆಯಲ್ಲಿ ದೂರವಾಣಿ ಉಪಕರಣ ದೂರವಾಣಿ ಇಲಾಖೆಯ ಒಡೆತನದಲ್ಲಿದ್ದು, ಅದನ್ನು ನಿಗದಿತ ಬಾಡಿಗೆಯಲ್ಲಿ ಉಪಯೋಗಿಸುವ ಹಕ್ಕುಮಾತ್ರ ಗ್ರಾಹಕನದಾಗಿರುತ್ತದೆ.

## ಜಾರಿಗೆ ಕಾರಣಗಳು

ಗುತ್ತಿಗೆ ಪದ್ಧತಿ ಜಾರಿಗೆ ಬರಲು ಅನೇಕ ಅಂಶಗಳು ಕಾರಣವಾಗಿವೆ. ಅವುಗಳಲ್ಲಿ ಮುಖ್ಯವಾದದ್ದು ಜನರ ವರಮಾನದ ಇತಿಮಿತಿ. ಈಗಿನ ಯಾಂತ್ರಿಕ ಯುಗದಲ್ಲಿ ಯಂತ್ರಗಳು ಹಾಗೂ ಇದರ ಬಿಡಿಭಾಗಗಳನ್ನು ಅವುಗಳ ವಿಪರೀತ ಬೆಲೆಗಳಿಂದಾಗಿ ಖರೀದಿ ಮಾಡುವುದು ಒಮ್ಮೆಗೇ ಕಷ್ಟ. ಆದ್ದರಿಂದ ಗುತ್ತಿಗೆ ಕಂಪನಿಗಳ ಸ್ಥಾಪನೆ ಪ್ರಾರಂಭ ಆಯಿತೆನ್ನಬಹುದು.

ಅದೇ ರೀತಿಯಲ್ಲಿ ವಿಜ್ಞಾನ ಪ್ರಗತಿ ಪಥದಲ್ಲಿರುವ ನಾವು ನಮ್ಮಲ್ಲಿ ದೊರಕುವ ಸೀಮಿತ ಬಂಡವಾಳ ಹೊಸ ಯಂತ್ರಗಳನ್ನು ಅಧಿಕ ಬೆಲೆಗಳಲ್ಲಿ ಕೊಳ್ಳುವುದರಿಂದ ನಷ್ಟ ಸಂಭವವನ್ನು ಎದುರಿಸಬೇಕಾಗಬಹುದು. ಅದರಂತೆ ಹೊಸ ಹೊಸ ಉಪಜ್ಞೆಗಳ (Inventions) ಈ ಯುಗದಲ್ಲಿ ಇಂದು ತೆಗೆದುಕೊಂಡ ಯಂತ್ರ ನಾಳೆ ಹಳತಾಗುವ ಸಾಧ್ಯತೆಗಳಿವೆ. ಕೊಂಡ ಯಂತ್ರಗಳ ಉಪಯೋಗವನ್ನು ಪೂರ್ಣ ಪ್ರಮಾಣದಲ್ಲಿ ಸಾಧಿಸಲಾಗುವುದಿಲ್ಲ. ಈ ಕಾರಣಗಳಿಂದ ದೊಡ್ಡ ಕಾರ್ಖಾನೆಗಳಲ್ಲಿ ದೊಡ್ಡ ಹೊಸ ಯಂತ್ರಗಳನ್ನು ಖರೀದಿಸುವವರೇ ಗುತ್ತಿಗೆ ಕಂಪನಿಗಳನ್ನು ಆಶ್ರಯಿಸುತ್ತಿದ್ದಾರೆ.

ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸರ್ಕಾರ ದೊಡ್ಡ ಹಾಗೂ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಒತ್ತು ಕೊಟ್ಟಿತು. ಇದರಿಂದಾಗಿ ಅನೇಕ ಕೈಗಾರಿಕೆಗಳು ಅಗಾಧ ಪ್ರಮಾಣದಲ್ಲಿ ಅಸ್ತಿತ್ವಕ್ಕೆ ಬಂದಿವೆ. ನಮ್ಮ ದೇಶ ಮುಂದುವರಿಯುತ್ತಿರುವ ರಾಷ್ಟ್ರವಾಗಿದ್ದು, ಮೂಲ ಬಂಡವಾಳದ ಕೊರತೆಯಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಬ್ಯಾಂಕುಗಳು ಈ ಕೊರತೆಯನ್ನು ನೀಗುವಲ್ಲಿ ತಮ್ಮ ಪಾಲಿನ ಕೆಲಸವನ್ನು ಮಾಡುತ್ತಿದ್ದರೂ ಮೇಲೆ ತಿಳಿಸಿದ ಕಾರಣಗಳಿಂದಾಗಿ ಗುತ್ತಿಗೆ ಕಂಪನಿಗಳು ಹುಟ್ಟಿಕೊಂಡುವು, ಹುಟ್ಟಿಕೊಳ್ಳುತ್ತಿವೆ.

## ಬೆಳವಣಿಗೆ

ಭಾರತದಲ್ಲಿ ಈಚೆಗೆ ಅಸ್ತಿತ್ವಕ್ಕೆ ಬಂದ ಸಂಸ್ಥೆಗಳು ಗುತ್ತಿಗೆ ವಹಿವಾಟುಗಳನ್ನು ಭಾರತದ ಕೈಗಾರಿಕಾ ಕ್ಷೇತ್ರದಲ್ಲಿ ಜನಪ್ರಿಯವಾಗಿಸಿವೆ. 1982ರಲ್ಲಿ ಮೂರು ಗುತ್ತಿಗೆ ವ್ಯವಹಾರ ಕಂಪನಿಗಳಿದ್ದುದು 1985ರಲ್ಲಿ ಇವುಗಳ ಸಂಖ್ಯೆ 200ರ ಗಡಿ ದಾಟಿದೆ.

ಗುತ್ತಿಗೆ ವ್ಯವಹಾರದಲ್ಲಿ ಹಣಕಾಸು ಗುತ್ತಿಗೆ (Financial Lease), ಪರಿಚಾಲನಾ ಗುತ್ತಿಗೆ (Operating Lease), ಬಿಕರಿ ನೆರವು ಗುತ್ತಿಗೆ (Sales Aid Lease) ಮತ್ತು ಅಂತಾರಾಷ್ಟ್ರೀಯ ಗುತ್ತಿಗೆ (International Lease) ಮುಂತಾದ ಅನೇಕ ಬಗೆಗಳಿವೆ.

ಪಾಶ್ಚಾತ್ಯ ದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳು ನೇರವಾಗಿ ಅಥವಾ ತಮ್ಮ ಸಹ ಸಂಸ್ಥೆಗಳ ಮೂಲಕ ಗುತ್ತಿಗೆ ವ್ಯವಹಾರವನ್ನು ನಡೆಸುತ್ತವೆ. ಅಲ್ಲಿ ಈ ವ್ಯವಹಾರದಲ್ಲಿ ಹೆಚ್ಚುವರಿ ಬಂಡವಾಳಕ್ಕೆ (Surplus Capital) ಸಿಗುವ ಸಿದ್ಧ ಮಾರುಕಟ್ಟೆ ಹಾಗೂ ಕರವಿನಾಯಿತಿ ಬಲು ಸಹಕಾರಿಯಾಗಿದೆ. ಈ ಅನುಕೂಲಗಳು ನಮ್ಮ ದೇಶದಲ್ಲಿ ಇಲ್ಲ. ಹೆಚ್ಚುವರಿ ಬಂಡವಾಳ ಸಿಗುವುದಂತೂ ಕಲ್ಪನೆಯ ಮಾತು. ಆದರೂ ಇಲ್ಲಿ ಗುತ್ತಿಗೆ ಕಂಪನಿಗಳ ವ್ಯವಹಾರ ಅಭಿವೃದ್ಧಿಯಾಗಿದೆ. ಈ ವ್ಯವಹಾರದಲ್ಲಿರುವ ಹೆಚ್ಚಿನ ಲಾಭಾಂಶ, ವಾಣಿಜ್ಯ ಬ್ಯಾಂಕುಗಳಲ್ಲಿ ಆಗುವ ವಿಪರೀತ ವೆಚ್ಚ ಮತ್ತು ದುರಸ್ತಿ ಖರ್ಚು (Maintenance expenditure) ಇವು ಗುತ್ತಿಗೆ ಕಂಪನಿಗಳ ಸ್ಥಾಪನೆಗೆ ಕಾರಣವಾದುವೆನ್ನಬಹುದು.

## ಬ್ಯಾಂಕುಗಳ ಪಾತ್ರ

1949ರ ಬ್ಯಾಂಕಿಂಗ್ ಅಧಿನಿಯಮದ ಪ್ರಕರಣ 8ರಲ್ಲಿ ಬ್ಯಾಂಕುಗಳು ಚರಾಸ್ತಿಯ ವ್ಯವಹಾರ ಮಾಡುವುದನ್ನು ನಿರ್ಬಂಧಿಸಲಾಗಿದೆ. ಭದ್ರತೆಗೋಸ್ಕರ (Security) ಪಡೆದ ಚರಾಸ್ತಿಗಳನ್ನು ಈ ನಿರ್ಬಂಧ ಹೊರತುಪಡಿಸಿದೆ. 1972ರ ಬ್ಯಾಂಕಿಂಗ್ ಆಯೋಗದ ಶಿಫಾರಸಿನ ಮೇರೆಗೆ ಬ್ಯಾಂಕಿಂಗ್ ಅಧಿನಿಯಮದಲ್ಲಿ ಪ್ರಕರಣ 19 (1)ನ್ನು ಸೇರಿಸಿ, ಬ್ಯಾಂಕುಗಳಿಗೆ ತಮ್ಮ ಸಹಸಂಸ್ಥೆಗಳ ಮೂಲಕ ಗುತ್ತಿಗೆ ವ್ಯವಹಾರ ಮಾಡಲು ಅನುಮತಿ ನೀಡಲಾಯಿತು. ಈ ನಿಯಮದ ಪ್ರಕಾರ 51% ಷೇರು ಬಂಡವಾಳದ ಅಥವಾ 30% ಇನ್ನಿತರ ಬಂಡವಾಳದ ಮೂಲಕ ವಾಣಿಜ್ಯ ಬ್ಯಾಂಕುಗಳು ಗುತ್ತಿಗೆ ಕಂಪನಿಗಳನ್ನು ಪ್ರಾರಂಭಿಸಬಹುದು. ಆದರೆ ಭಾರತೀಯ ರಿಸರ್ವ್ ಬ್ಯಾಂಕಿನ ಆದೇಶದಂತೆ ಈ ಕಂಪನಿಗಳಲ್ಲಿ ವಾಣಿಜ್ಯ ಬ್ಯಾಂಕಿನ ಧನ ವಿನಿಯೋಜನೆ ತನ್ನ ಪಾವತಿಯಾದ ಬಂಡವಾಳದ ಶೇಕಡ 10ಕ್ಕಿಂತ ಜಾಸ್ತಿ ಇರಬಾರದು. ಬ್ಯಾಂಕಿನ ಗುತ್ತಿಗೆ ವ್ಯವಹಾರದ ಸಹಸಂಸ್ಥೆಗಳು ಇನ್ನಾವುವೇ ಗುತ್ತಿಗೆ ಕಂಪನಿಗಳಿಗೆ/ಸಂಸ್ಥೆಗಳಿಗೆ ಹಣ ಸಹಾಯ ಮಾಡಬಾರದು, 'ಬಾಡಿಗೆ ಕೊಳ್ಳಿಕೆ' (Hire purchase) ವ್ಯವಹಾರ ನಡೆಸಬಾರದು. ಆದರೆ ಸಾರ್ವಜನಿಕರಿಂದ ಠೇವಣಿಗಳ ಮೂಲಕ, ಡಿಬೆಂಚರುಗಳ ಮೂಲಕ, ಬ್ಯಾಂಕ್ ಸಾಲ ರೂಪದಲ್ಲಿ ಆರ್ಥಿಕ ಬಲವನ್ನು ಪಡೆಯಬಹುದು. ಜನರಿಂದ ಶೇಖರಿಸಿದ ಠೇವಣಿಗಳಿಗೆ ಗರಿಷ್ಠ ಬಡ್ಡಿದರ 15ರಷ್ಟನ್ನು ಕೊಡುವ ಅಧಿಕಾರ ಗುತ್ತಿಗೆ ಕಂಪನಿಗಳಿಗೆ ಇದೆ. ಠೇವಣಿಗಳ ಗರಿಷ್ಠ ಅವಧಿ 36 ತಿಂಗಳುಗಳು ಮಾತ್ರ.

ಗುತ್ತಿಗೆ ಕಂಪನಿ ವ್ಯವಹಾರ ಭಾರತ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೊಸ ಪ್ರವೇಶವಾಗಿದೆ. ಇದನ್ನು ನಡೆಸುವರಿಗೆ ಹೆಚ್ಚಿನ ಪರಿಣಿತಿ ಹಾಗೂ ವಿಶಿಷ್ಟ ಹೊಣೆಗಾರಿಕೆ ಅತ್ಯಂತ ಮುಖ್ಯ. 1984ರಿಂದೀಚೆಗೆ, ಅಂತರ ರಾಷ್ಟ್ರೀಯ ಹಣಕಾಸು ನಿಗಮದ (I.F.C) ಸಹಾಯದಲ್ಲಿ, ಉತ್ತರ ಭಾರತದಲ್ಲಿ ಪಂಜಾಬ್ ನ್ಯಾಶನಲ್ ಬ್ಯಾಂಕ್ ಹಾಗೂ ಜನರಲ್ ಮೋಟಾರ್ ಫೈನಾನ್ಸ್ ಕಂಪನಿಯ ಜತೆ, ದಕ್ಷಿಣ ಭಾರತದಲ್ಲಿ

ಭಾರತೀಯ ಸ್ಟೇಟ್ ಬ್ಯಾಂಕ್ ಹಾಗೂ ಸುಂದರಂ ಫೈನಾನ್ಸ್ ಜೊತೆ, ಪಶ್ಚಿಮದಲ್ಲಿ ಬ್ಯಾಂಕ್ ಆಫ್ ಇಂಡಿಯಾ ಮತ್ತು ಟ್ವೆಂಟಿಯತ್ ಸೆಂಚುರಿ ಲೀಸಿಂಗ್ ಕಂಪನಿಯ ಜೊತೆ ಹಾಗೂ ಪೂರ್ವ ಭಾಗದಲ್ಲಿ ಅಲಹಾಬಾದ್ ಬ್ಯಾಂಕ್ ಮತ್ತು ಖಾಸಗಿ ವಲಯದ ಒಂದು ಕಂಪನಿಯ ಸಹಭಾಗಿತ್ವದಲ್ಲಿ ಲೀಸಿಂಗ್ ಸಂಸ್ಥೆಗಳ ಸ್ಥಾಪನೆಗೆ ಪ್ರಯತ್ನಗಳು ನಡೆದಿವೆ. ಅನೇಕ ರಾಷ್ಟ್ರೀಕೃತ ಬ್ಯಾಂಕುಗಳು ಲೀಸಿಂಗ್ ವ್ಯವಹಾರದ ಕಡೆ ಆಕರ್ಷಿತವಾಗಿ ಸಹ ಸಂಸ್ಥೆಗಳ ಸ್ಥಾಪನೆಗೆ ಭಾರತೀಯ ರಿಸರ್ವ್ ಬ್ಯಾಂಕಿನ ಅನುಮತಿಗಾಗಿ ಕೇಳಿಕೊಂಡಿವೆ. ಈ ನಿಟ್ಟಿನಲ್ಲಿ ಪ್ರಥಮ ಪ್ರಯತ್ನಗಳಾಗಿವೆ.

ಬ್ರೆಜಿಲ್, ಕೊರಿಯಾ ಹಾಗೂ ಫಿಲಿಪೀನ್ಸ್ ದ್ವೀಪಗಳಲ್ಲಿ ಲೀಸಿಂಗ್ ಸಂಸ್ಥೆಗಳ ಹುಟ್ಟಿಗೆ ಅಂತಾರಾಷ್ಟ್ರೀಯ ಹಣಕಾಸು ನಿಗಮ ಕಾರಣೀಭೂತವಾಗಿ ಅವುಗಳ ಏಳಿಗೆಯನ್ನು ಅಲ್ಲಿ ಸಾಧಿಸಲಾಗಿದೆ. ಈ ಏಳಿಗೆಯನ್ನು ಗಮನಿಸಿ, ಭಾರತದಲ್ಲೂ ನಿಗಮದ ಅನುಭವ ಹಾಗೂ ಪರಿಣತಿಯನ್ನು ಪಡೆಯುವಲ್ಲಿ ಸರ್ಕಾರ ಪ್ರಯತ್ನ ನಡೆಸಿದೆ.

### ಬ್ಯಾಂಕುಗಳ ಅರ್ಹತೆ

ಭಾರತೀಯ ಅರ್ಥವ್ಯವಸ್ಥೆಯಲ್ಲಿ ಪರಿಣತಿ ಪಡೆದಿರುವ ವಾಣಿಜ್ಯ ಬ್ಯಾಂಕುಗಳಿಗೆ ಲೀಸಿಂಗ್ ಕಂಪನಿಗಳನ್ನು ಸಹ ಸಂಸ್ಥೆಗಳಾಗಿ ನಡೆಸಲು ಅನುಮತಿಯನ್ನು ಕೊಡುವುದು ಅನೇಕ ವಿಧದಲ್ಲಿ ಸೂಕ್ತ. ಏಕೆಂದರೆ ಇಂದಿನ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆರ್ಥಿಕ ತಜ್ಞರಿದ್ದಾರೆ, ಪರಿಣತ, ಅನುಭವಿ ಸಿಬ್ಬಂದಿ ಸೌಕರ್ಯವಿದೆ, ಭಾರತದ ಆರ್ಥಿಕ ಸ್ಥಿತಿಗತಿಗಳ ಮಾಹಿತಿ ಸಿಗುತ್ತದೆ. ವ್ಯವಸಾಯ ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿ ವಹಿವಾಟನ್ನು ನಡೆಸಿದ ಅನುಭವ ಚೆನ್ನಾಗಿದೆ. ಇಷ್ಟಲ್ಲದೆ ಸಾರ್ವಜನಿಕರಿಗೆ ಇಂದು ಬ್ಯಾಂಕುಗಳು ಅವರ ಜೀವನದಲ್ಲಿ ಒಂದು ಜೀವನಾಡಿಯಾಗಿ ಕೆಲಸ ಮಾಡುತ್ತಿದ್ದು, ಬ್ಯಾಂಕುಗಳು ಯಾವುದೇ ಕೆಲಸ ಮಾಡಿದರೂ ಅದಕ್ಕೆ ಜನಮನ್ನಣೆ ಖಂಡಿತ ದೊರೆಯುತ್ತದೆ. ಬ್ಯಾಂಕುಗಳಿಗೆ ಕೂಡ ಗುತ್ತಿಗೆ ವ್ಯವಹಾರದಲ್ಲಿ ಬರುವ ಹೆಚ್ಚಿನ ಲಾಭಾಂಶ ಹಾಗೂ ಭದ್ರತಾ ದೃಷ್ಟಿಯಿಂದ ಸಾಲ ವಿನಿಯೋಜನೆ ಬಹು ಅನುಕೂಲಕರ ಅಂಶಗಳು.

ವಾಣಿಜ್ಯೋದ್ಯಮಿಗಳಿಗೆ ಗುತ್ತಿಗೆ ಕಂಪನಿಗಳಿಂದ ಅನೇಕ ಉಪಯೋಗಗಳು ಇವೆ. ಬ್ಯಾಂಕ್ ಸಾಲ ತೆಗೆದುಕೊಳ್ಳುವಾಗ ಬೇಕಾದ 'ಸ್ವಭಾಗ' (Margin) ಬಂಡವಾಳದ ಅನುಪಸ್ಥಿತಿ, ಪ್ರಾರಂಭಿಕ ವಿನಿಯೋಜನೆಯಲ್ಲಿ (Intial investment)ಕಡಿತ, ಚರಾಸ್ತಿಗಳ ಮೇಲೆ ಸುಲಭ ಹಾಗೂ ಸಂದರ್ಭೋಚಿತ ಧನಸಹಾಯದ ಸೌಕರ್ಯ, ಆದಾಯ ಆಧಾರಿತ ಬಾಡಿಗೆ ದರದ ವಿಷ್ಕರ್ಷೆ, ಬಾಡಿಗೆ ದರದ (Lease rent) ಮೇಲೆ ಕರ ವಿನಾಯಿತಿ ಮುಂತಾದ ಕಾರಣಗಳಿಂದ ಸಣ್ಣ ಹಾಗೂ ಮಧ್ಯಮ ಕೈಗಾರಿಕಾ ಸಂಸ್ಥೆಗಳಲ್ಲಿ ಗುತ್ತಿಗೆ ಕಂಪನಿಗಳ ವಹಿವಾಟು ಬೆಳೆಯಲು ಕಾರಣವಾಯಿತು.

ಗುತ್ತಿಗೆ ಕಂಪನಿಗಳ ಬೆಳವಣಿಗೆಯಿಂದಾಗಿ ಈಗ ವಾಣಿಜ್ಯ ಬ್ಯಾಂಕುಗಳು ಕೈಗಾರಿಕೋದ್ಯಮಿಗಳಿಗೆ ಸಹಾಯವನ್ನು ಮಾತ್ರ ನೀಡಬೇಕಾದ ಪರಿಸ್ಥಿತಿ ಒದಗಿಬಂದಿರುವುದು ಒಂದು ಆಶಾದಾಯಕ ಹೆಜ್ಜೆ. ಇದರಿಂದಾಗಿ ಇತರ ಬಗೆಯ ಸಾಲ ಹಾಗೂ ಮುಂಗಡಗಳ ಹಣವನ್ನು ಬೇರೆಡೆ ವಿನಿಯೋಗಿಸಬಹುದಾಗಿದೆ. ಈ ವಿಷಯದಲ್ಲಿ ಕೈಗಾರಿಕೋದ್ಯಮಗಳಿಂದ ಭಾರತೀಯ ಕೈಗಾರಿಕಾಭಿವೃದ್ಧಿ ಬ್ಯಾಂಕ್, ರಾಜ್ಯ ಹಣಕಾಸು ನಿಗಮ, ಜೀವವಿಮಾ ನಿಗಮ, ಹಾಗೂ ಯೂನಿಟ್ ಟ್ರಸ್ಟ್ ಮುಂತಾದ ಸಂಸ್ಥೆಗಳ ಮೇಲೆ ಸಾಲಗಳ ಒತ್ತಡ ಕಡಿಮೆಯಾಗಿರುವುದು ಕಂಡುಬಂದಿದೆ. ಬ್ಯಾಂಕುಗಳಲ್ಲಿ ಪ್ರಚಲಿತದಲ್ಲಿರುವ ಸಾಲ ಪಾವತಿ ಮತ್ತು ಮರುಪಾವತಿಗಳಲ್ಲಿನ ಕ್ಲಿಷ್ಟ ಕರರೀತಿ-ನೀತಿಗಳು, ಗುತ್ತಿಗೆ ಬ್ಯಾಂಕುಗಳ ವೈಶಿಷ್ಟ್ಯಪೂರ್ಣ ಸಾಲ ಕ್ರಮಗಳಿಂದಾಗಿ ಬ್ಯಾಂಕುಗಳು ಇತ್ತ ಕಡೆ ಗಮನ ಹರಿಸುವುದು ಅತ್ಯಗತ್ಯ. ಅಂದರೆ ಗುತ್ತಿಗೆ ಕಂಪನಿಗಳಲ್ಲಿನ ಸಾಲ ಕ್ರಮದಲ್ಲಿ ಚರಾಚರಾಸ್ತಿಗಳ ಒಡೆತನ ಕಂಪನಿಯದೇ ಆಗಿರುತ್ತದೆ. ಸಾಲ ಮರುಪಾವತಿಯ ವಿಷಯದಲ್ಲಿ ಯಾವುದೇ ತಕರಾರು ಹುಟ್ಟಿಕೊಳ್ಳಲು ಅವಕಾಶ ಇರುವುದಿಲ್ಲ.

ನಗರ ಪ್ರದೇಶಗಳಲ್ಲಿ ಮಾತ್ರ ಸೀಮಿತವಾಗಿ ಬೆಳೆದು ಬರುತ್ತಿರುವ ಗುತ್ತಿಗೆ ಕಂಪನಿ ವ್ಯವಹಾರವನ್ನು ಗ್ರಾಮೀಣ ಪ್ರದೇಶಗಳಿಗೂ ವ್ಯಾಪಿಸುವಂತೆ ಮಾಡಿ, ಅದಕ್ಕೆ ಸೂಕ್ತವಾದ ರೀತಿ-ನೀತಿ-ನಿಯಮಾವಳಿಗಳನ್ನು ಆವಿಷ್ಕರಿಸಿ, ಅದರ ಮೂಲಕ ಭಾರತದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸುವುದು ಬ್ಯಾಂಕ್ ತಜ್ಞರ ಕರ್ತವ್ಯವಾಗಬೇಕು. ಭಾರತದ ಸರ್ವತೋಮುಖ ಅಭಿವೃದ್ಧಿ ಇದರಿಂದ ಸಾಧಿಸಲು ಸಹಾಯವಾಗಬೇಕು. ●

---

## ಬ್ಯಾಂಕುಗಳಲ್ಲಿ ಆದಾಯ ಸೋರಿಕೆ

[22ನೆಯ ಪುಟದಿಂದ ಮುಂದುವರಿದುದು]

ಮಟ್ಟ ಎಂತಹುದು ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಬ್ಯಾಂಕಿಂಗ್ ಸೇವಾ ನೇಮಕಾತಿ ಮಂಡಳಿಯಿಂದ ಆಯ್ಕೆಯಾಗಿ ಬ್ಯಾಂಕುಗಳನ್ನು ಸೇರುವ ಅಭ್ಯರ್ಥಿಗಳು ಕೆಲಸಕ್ಕೆ ಹೊಂದಿಕೊಂಡು ಸಮರ್ಪಕವಾಗಿ, ದಕ್ಷತೆಯಿಂದ ಕಾರ್ಯ ನಿರ್ವಹಿಸಲು ಸಾಕಷ್ಟು ಕಾಲಾವಕಾಶ ಬೇಕು, ತರಬೇತಿಯ ಆವಶ್ಯಕತೆಯೂ ಇದೆ. ಇಲ್ಲಿ ತರಬೇತಿ ಕೇಂದ್ರಗಳ ಹೊಣೆ ಹೆಚ್ಚಿನದಾಗಿದೆ. ಶಾಖಾ ಮಟ್ಟದಲ್ಲಿ ಸಹ ವ್ಯವಸ್ಥಾಪಕರು ಪರಿಚಾಲನೆಯಲ್ಲಿ ತಕ್ಕ ಮಾರ್ಪಾಟನ್ನು ಮಾಡಿಕೊಳ್ಳಬೇಕಾಗುತ್ತದೆ.

ಆದಾಯ ಸೋರಿಕೆ ಕ್ರಮೇಣ ಕಡಿಮೆಯಾಗುತ್ತ ಬಂದಾಗ, ಬ್ಯಾಂಕ್ ಸಿಬ್ಬಂದಿಗಳ ಕಾರ್ಯಕ್ಷಮತೆ, ಉತ್ಪಾದಕತೆಯ ಮಟ್ಟ ಬಹಳಷ್ಟು ಸುಧಾರಿಸುತ್ತವೆ ಎನ್ನಬಹುದು. ●

## ಭವಿಷ್ಯದಲ್ಲಿ ಬ್ಯಾಂಕು

ಪೀಟರ್ ಎಸ್. ರೋಸ್

ಬ್ಯಾಂಕರುಗಳು ಮೂರು ಮೂಲಭೂತ ಅಂಶಗಳ ಬಗ್ಗೆ ರಚನಾತ್ಮಕ ರೀತಿಯಲ್ಲಿ ಆಲೋಚನೆ ಮಾಡುವುದನ್ನು ಕಲಿಯಬೇಕು. ಮುಂದಿನ ವರ್ಷಗಳಲ್ಲಿ ಅವರ ಯಶಸ್ಸಿನ ಅಥವಾ ಅಪಯಶಸ್ಸಿನ ನಿರ್ಣಯವಾಗತಕ್ಕದ್ದು ಈ ಉತ್ತರಗಳ ಆಧಾರದ ಮೇಲೆ. ಒಂದು ನಿರ್ಣಾಯಕ ಅಂಶವೆಂದರೆ ತಂತ್ರಜ್ಞಾನ—ಬ್ಯಾಂಕು ನಾಳಿನ ದಿನಗಳಲ್ಲಿ ಸ್ಪರ್ಧಾತ್ಮಕವಾಗಿರುವುದು ಸಾಧ್ಯವಾಗುವಂತೆ ಮಾಡಬಲ್ಲ ಯಾವ ಬಗೆಯ ಸೇವಾ ಉತ್ಪಾದನೆ ಮತ್ತು ಪೂರೈಕೆಯ ವಿಧಾನಗಳನ್ನು ಅದು ಇಂದು ಅಳವಡಿಸಿಕೊಳ್ಳಬೇಕು ಎಂಬುದು. ಎರಡನೆಯದು ಸಂಘಟನೆ—ಭವಿಷ್ಯದಲ್ಲಿ ವೆಚ್ಚಗಳ ಮೇಲೆ ಹತೋಟಿ ಸಾಧಿಸಲು ಹಾಗೂ ಮಾಹಿತಿಯನ್ನು ದಕ್ಷರೀತಿಯಲ್ಲಿ ಬಳಸಿಕೊಳ್ಳಲು ಸಹಾಯಕವಾಗುವಂತೆ ಯಾವ ರೀತಿಯಲ್ಲಿ ಜನರ, ಸ್ಥಳಗಳ, ಹಾಗೂ ವಸ್ತುಗಳ ಸಂರಚನೆಯನ್ನು ನಾವು ಇಂದು ರೂಪಿಸಬಲ್ಲೆವು ಎಂಬುದು. ಮೂರನೆಯದೆಂದರೆ ಬೆಲೆ ನಿಗದಿ—ಗತಿಶೀಲ ಹಣಕಾಸು ಮಾರುಕಟ್ಟೆಯ ಕ್ಷೇತ್ರದಲ್ಲಿ ನಮ್ಮ ಸೇವೆಗಳು ಲಾಭಪ್ರದವೂ ಸ್ಪರ್ಧಾತ್ಮಕವೂ ಆಗುವ ಭರವಸೆ ಇರುವಂತೆ ನಾವು ಅವುಗಳ ಮೌಲ್ಯ ನಿರ್ಧರಿಸಿ ನಿಗದಿ ಮಾಡುವುದು ಹೇಗೆ? ಯಾವುದೇ ಬ್ಯಾಂಕು, ಸಣ್ಣದಿರಲಿ ದೊಡ್ಡದಿರಲಿ, ಈ ಮೂರು ಮೂಲಭೂತ ಅಂಶಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳದೆ ಇರುವುದು ಸಾಧ್ಯವೇ ಇಲ್ಲ. ಅಲ್ಲದೆ, ಆ ತೀರ್ಮಾನಗಳಂತೆ ಇತ್ಯಾತ್ಮಕ ಕ್ರಮ ತೆಗೆದುಕೊಳ್ಳಲು ಬ್ಯಾಂಕರುಗಳು ಶೀಘ್ರವಾಗಿ ಒಮ್ಮನಸ್ಸಿನಿಂದ ತೊಡಗಬೇಕು. ಏಕೆಂದರೆ ಇಂದಿನ ಬ್ಯಾಂಕಿಂಗ್ ತಂತ್ರಜ್ಞಾನ, ಸಂಘಟನೆ ಮತ್ತು ಬೆಲೆ ನಿಗದಿ ವಿಧಾನಗಳು ನಾಳೆಗೂ ಸರಿಯೆನಿಸಲಾರವು. ಇದು ನಿರ್ವಿವಾದ, ಹೆಚ್ಚು ಹೆಚ್ಚು ಕಲಿಯಲು ಹಾಗೂ ಹೆಚ್ಚು ಹೆಚ್ಚು ಸೇವೆ ನೀಡಲು ನಾವು ಸಿದ್ಧರಾಗಿರಬೇಕು.

# ಬ್ಯಾಂಕುಗಳಲ್ಲಿ ಆದಾಯ ಸೋರಿಕೆ

**ಪೆನ್ನಿಗಳನ್ನು ಕಡೆಗಣಿಸದಿದ್ದರೆ ಪೌಂಡುಗಳು ತಾವಾಗಿಯೇ ಕೂಡಿಬರುತ್ತವೆ ಎಂಬ ಅರ್ಥದ ಮಾತೊಂದು ಇಂಗ್ಲಿಷಿನಲ್ಲುಂಟು. ಪೈಸೆಯನ್ನು ಉಳಿಸಿದರೆ ರೂಪಾಯಿ ಲಾಭ ತಾನಾಗಿಯೇ ಬರುತ್ತದೆ ಎಂಬುದನ್ನು ಬ್ಯಾಂಕುಗಳು ಇಂದು ಅರಿಯಬೇಕಾಗಿದೆ. ಸೋರಿಕೆ ಎಲ್ಲಾಗುತ್ತದೆ, ಅದನ್ನು ನಿಲ್ಲಿಸುವುದು ಹೇಗೆ ಎಂಬುದನ್ನು ಈ ಲೇಖನ ಚರ್ಚಿಸುತ್ತದೆ.**

ಗ್ರಾಹಕರಿಂದ ಠೇವಣಿಗಳನ್ನು ಸ್ವೀಕರಿಸುವುದು ಹಾಗೂ ಅವುಗಳಿಂದ ಸಾಲ ನೀಡಿಕೆ—ಇದು ಬ್ಯಾಂಕುಗಳ ಮುಖ್ಯ ಕಾರ್ಯಭಾರ. ಇದರ ಜೊತೆಗೆ ಬ್ಯಾಂಕುಗಳು ಹಣದ ವರ್ಗಾವಣೆ, ಬಿಲ್ಲು ಚೆಕ್ಕುಗಳ ವಸೂಲಿ, ವಟಾವಣೆ, ಭದ್ರ ಸುಫರ್ದು ಸೌಲಭ್ಯ, ಸರಕಾರಿ ವಹಿವಾಟು, ವಿದೇಶಿ ವಿನಿಮಯ ವಹಿವಾಟು ಮುಂತಾದ ಇತರ ಸೇವೆಗಳನ್ನು ನೀಡುತ್ತವೆ.

ಸ್ವೀಕರಿಸಿದ ಠೇವಣಿಗಳ ಮೇಲೆ ನೀಡುವ ಬಡ್ಡಿ, ನೀಡಿದ ಸಾಲಗಳ ಮೇಲೆ ವಿಧಿಸುವ ಬಡ್ಡಿ—ಇವುಗಳ ಅಂತರವೇ ಬ್ಯಾಂಕಿನ ಆದಾಯದ ಬಹುಮುಖ್ಯ ಭಾಗ. ಜೊತೆಗೇ ಇತರ ಸೇವೆಗಳ ಮೇಲೆ ವಿಧಿಸುವ ಶುಲ್ಕವೂ ಒಂದು ಆದಾಯ ಮೂಲ.

ಬ್ಯಾಂಕುಗಳ ಸಾಲ ನೀಡಿಕೆ ರಿಸರ್ವ್ ಬ್ಯಾಂಕಿನಿಂದ ನಿಯಂತ್ರಿಸಲ್ಪಡುತ್ತದೆ. ಬ್ಯಾಂಕುಗಳು ಪರಿನಿಯತ ದ್ರವತ್ವ ಅನುಪಾತ ಹಾಗೂ ನಗದು ಮೀಸಲು ನಿಧಿಯನ್ನು ಹೊರತುಪಡಿಸಿ ಉಳಿದ ಹಣವನ್ನು ಸಾಲ ನೀಡಿಕೆಗೆ ಬಳಸಿಕೊಳ್ಳಬೇಕು. ತಾವು ನೀಡುವ ಸಾಲದಲ್ಲಿ ಶೇ. 40ರಷ್ಟನ್ನು ಆದ್ಯತಾವಲಯಕ್ಕೆ ನೀಡಬೇಕು. ಸರ್ಕಾರದ ಹಲವು ಯೋಜನೆಗಳನ್ವಯ ಕಡಿಮೆ ಬಡ್ಡಿದರದಲ್ಲಿ ಅವು ಸಾಲ ನೀಡಬೇಕಾಗುತ್ತದೆ. ಇವೆಲ್ಲವುಗಳ ಅನಂತರ ತುಸು ಹೆಚ್ಚಿನ ಬಡ್ಡಿದರದಲ್ಲಿ ಆಹಾರ ಧಾನ್ಯೇತರ, ವ್ಯಾಪಾರೋದ್ಯಮ ಚಟುವಟಿಕೆಗಳಲ್ಲಿ ತೊಡಗಿಸಲು ಬ್ಯಾಂಕುಗಳಿಗೆ ಉಳಿಯುವ ಹಣ ಪ್ರತಿಶತ ಬಹಳ ಕಡಿಮೆ. ಇದು ಬ್ಯಾಂಕುಗಳಿಗೆ ಹೆಚ್ಚಿನ ಆದಾಯ ದೊರಕಿಸಿಕೊಡುತ್ತದೆ. ಪಡೆಯಬಹುದಾದ ಆದಾಯವನ್ನು ಲೋಪವಿಲ್ಲದೆ ಪಡೆದುಕೊಳ್ಳುವುದು ಅತ್ಯಂತ ಅವಶ್ಯಕವಾಗಿದೆ. ಅಳಿಸಿಹಾಕುವ ಲೆಕ್ಕಕ್ಕೇ ಸೇರಿಸಬೇಕಾಗಬಹುದಾದ ಜಿಗುಟು ಹಾಗೂ ಅಸ್ವಸ್ಥ ಖಾತೆಗಳ ಹೆಚ್ಚಿನ ಸಂಖ್ಯೆ, ಕೆಟ್ಟ ಹಾಗೂ ವಸೂಲಾಗದ ಸಾಲಗಳ ಸಂಖ್ಯೆಯ ಹೆಚ್ಚಳ, ಸಿಬ್ಬಂದಿ ವೇತನ ವೆಚ್ಚ ಹಾಗೂ ಇತರ ಪರಿಚಾಲನ ವೆಚ್ಚಗಳ ಆಧಿಕ್ಯ—ಇವು ಆದಾಯ ಸೋರಿಕೆಯನ್ನು ತಡೆಗಟ್ಟುವತ್ತ ಬ್ಯಾಂಕಿಂಗ್ ಉದ್ಯಮ ತನ್ನ ಗಮನ ಹರಿಸುವಂತೆ ಮಾಡಿವೆ.

## ಸೋರಿಕೆಗೆ ಕಾರಣಗಳು

ಬ್ಯಾಂಕುಗಳ ಆದಾಯ ಸಂಪಾದನೆಯ ಹಂತದಲ್ಲಿ ಎಲ್ಲೆಲ್ಲಿ ಎಷ್ಟೆಷ್ಟರ ಮಟ್ಟಿಗೆ ಸೋರಿಕೆಯಾಗುತ್ತಿದೆ ಎಂಬುದನ್ನು ಗಮನಿಸಿದಾಗ ಅನೇಕ ಅಂಶಗಳು ಕಂಡುಬರುತ್ತವೆ. ಆದಾಯ ಸೋರಿಕೆಗೆ ಕಾರಣಗಳು ಅದಕ್ಷತೆ, ಬೇಜವಾಬ್ದಾರಿ, ನಿಯಮಗಳ ಸ್ಪಷ್ಟತೆಯ ಅಭಾವ ಇತ್ಯಾದಿ. ಜೊತೆಗೆ ಉದ್ದೇಶಪೂರ್ವಕ ತಪ್ಪುಗಳು, ಅಜಾಗರೂಕತೆಯಿಂದಾಗಿ ಸರಿಯಾದ ತಪಾಸಣೆ ಇಲ್ಲದೆ ಆಗುವ ತಪ್ಪುಗಳೂ ಕಾರಣಗಳಾಗುತ್ತವೆ. ಶಾಖೆಯ ಮಟ್ಟದಲ್ಲಿ ಸಿಬ್ಬಂದಿಗಳು ಮಾಡಿದ ಲೆಕ್ಕಾಚಾರವನ್ನು ಶಾಖೆಯ ಅಧಿಕಾರಿಗಳು ತಪಾಸಿಸಿ ಆದ ತಪ್ಪುಗಳನ್ನು ಸರಿಪಡಿಸಿರುತ್ತಾರಾದರೂ ಸಾಮಾನ್ಯವಾಗಿ ಈ ರೀತಿಯ ತಪ್ಪುಗಳು ಹೆಚ್ಚಾಗಿ ಸಿಗುವುದು ಶಾಖೆಗಳನ್ನು ತಪಾಸಣೆ ಮಾಡುವ ಆಂತರಿಕ ಲೆಕ್ಕ ಪರಿಶೋಧಕರಿಂದಲೇ. ಆಗ ಆಗಿ ಹೋಗಿರುವ ಲೋಪಗಳನ್ನು ಸರಿಪಡಿಸಿದರೂ ಅದನ್ನು ಪ್ರಾದೇಶಿಕ ಕಛೇರಿ, ವಲಯ ಕಛೇರಿ, ವಿಭಾಗೀಯ ಕಛೇರಿಗಳವರೆಗೆ ವರದಿ ಮಾಡುತ್ತಾರೆ. ಈ ಲೋಪಗಳು/ತಪ್ಪುಗಳು ಪುನಃ ಪುನಃ ಆಗಬಾರದೆಂಬುದೇ ವರದಿ ಮಾಡುವುದರ ಉದ್ದೇಶ. ಆಂತರಿಕ ಲೆಕ್ಕ ಪರಿಶೋಧಕರು ಗಮನಿಸಿರುವಂತೆ ಆದಾಯ ಸೋರಿಕೆಗೆ ಕಾರಣವಾಗುವ ಅಂಶಗಳನ್ನು ಈ ರೀತಿ ಪಟ್ಟಿ ಮಾಡಬಹುದು :


ಎಂ. ಎಸ್. ಶಿವಕುಮಾರಸ್ವಾಮಿ
ಮೈಸೂರು ಬ್ಯಾಂಕು
ಬಿ.ಆರ್. ಪ್ರಾಜೆಕ್ಟ್ ಶಾಖೆ, ಶಿವಮೊಗ್ಗ ಜಿಲ್ಲೆ


1 ಉಳಿತಾಯ ಖಾತೆಯೂ ಸೇರಿದಂತೆ ಎಲ್ಲ ರೀತಿಯ ಠೇವಣಿ ಖಾತೆಗಳ ಮೇಲೆ ಬಡ್ಡಿಯ ಹೆಚ್ಚಳ ಪಾವತಿ,
2 ನಗದು ದರಿ/ಮೀರೆಳೆತಗಳನ್ನೊಳಗೊಂಡಂತೆ ಎಲ್ಲ ರೀತಿಯ ಸಾಲಗಳ ಖಾತೆಗಳ ಮೇಲೆ ಕಡಿಮೆ ಬಡ್ಡಿ ವಿಧಿಸುವಿಕೆ,
3 ಚಾಲ್ತಿ ಖಾತೆಗಳ ಋಣಿಕೆ ಶಿಲ್ಕುಗಳು ಮತ್ತು ಅವಧಿ ಮೀರಿದ ಸಾಲಗಳ ಮೇಲೆ ಹೆಚ್ಚುವರಿ ಬಡ್ಡಿ ವಿಧಿಸದಿರುವುದು,
4 ವಟಾಯಿಸಲಾದ ಚೆಕ್ಕುಗಳ/ಬಿಲ್ಲುಗಳ/ಹುಂಡಿಗಳ ಮೇಲೆ ಹೆಚ್ಚುವರಿ ಬಡ್ಡಿಯನ್ನು ವಸೂಲು ಮಾಡದಿರುವುದು,
5 ಚೆಕ್ಕುಗಳನ್ನು/ಬಿಲ್ಲುಗಳನ್ನು ಹಿಂದಿರುಗಿಸಿದಾಗ ಸೇವಾ ಶುಲ್ಕವನ್ನು ವಸೂಲು ಮಾಡದಿರುವುದು,
6 ಎಲ್ಲ ರೀತಿಯ ಸಾಲದ ಖಾತೆಗಳಿಗೆ/ಚಾಲ್ತಿ ಖಾತೆಗಳಿಗೆ ಸೇವಾಶುಲ್ಕವನ್ನು ವಿಧಿಸದಿರುವುದು,
7 ಅಂಚೆ ವರ್ಗಾವಣೆ, ತಂತಿ ವರ್ಗಾವಣೆ, ತಗಾದೆ ಡ್ರಾಫ್ಟ್‌ಗಳ ನೀಡಿಕೆಗೆ ಪ್ರಧಾನ ಕಛೇರಿ ನಿಗದಿಪಡಿಸಿರುವುದಕ್ಕಿಂತ ಕಡಿಮೆ ವಿನಿಮಯದರವನ್ನು ಪಡೆಯುವುದು,
8 ಬ್ಯಾಂಕು ಜಾಮೀನಿನ ನವೀಕರಣ ಸಮಯದಲ್ಲಿ ಕಮಿಷನ್ ವಸೂಲು ಮಾಡದಿರುವುದು,
9 ಸರ್ಕಾರದಿಂದ ದೊರೆಯುವ ಬಡ್ಡಿ ಸಹಾಯ ಧನವನ್ನು ಕ್ರಮವಾಗಿ ಪಡೆಯದಿರುವುದು,
10 ಸುರಕ್ಷಾ ಠೇವಣಿ ಲಾಕರುಗಳ ಬಾಡಿಗೆಯ ಅಸಮರ್ಪಕ ವಸೂಲಾತಿ,
11 ಸರ್ಕಾರಿ ವಹಿವಾಟಿನಿಂದ ಬರಬೇಕಾದ ಕಮಿಷನನ್ನು ಸರಿಯಾಗಿ ಪಡೆಯದಿರುವುದು,
12 ವಿದೇಶಿ ವಿನಿಮಯ ವಹಿವಾಟಿನಲ್ಲಿ ಅಸಮಂಜಸ ದರ ನಿರ್ವಹಣೆ,
13 ಅಸಮರ್ಪಕ ನಗದು ನಿರ್ವಹಣೆ,
14 ಸವಕಳಿಯ ಮೌಲ್ಯವನ್ನು ಕಡಿಮೆ ಮಾಡುವುದು.

ಈ ಪಟ್ಟಿ ಇಷ್ಟಕ್ಕೇ ಸೀಮಿತವಲ್ಲ. ಇವು ಕೆಲವು ಸಾಮಾನ್ಯ ಲೋಪದೋಷಗಳು. ಇನ್ನು, ಆದಾಯವಾಗಬಹುದಾಗಿದ್ದ ಅಂಶಗಳು ಅಕರದಲ್ಲೇ ಸೋರಿ ಹೋಗುವ ಸಾಧ್ಯತೆಗಳು ಕಡಿಮೆಯೇನಿಲ್ಲ. ಬ್ಯಾಂಕುಗಳಲ್ಲಿ ಈ ರೀತಿ ಆದಾಯ ಸೋರಿಕೆಯಿಂದ ಕೋಟಿಗಟ್ಟಲೆ ಹಣ ಪೋಲಾಗುತ್ತಿದೆ. ಇದನ್ನು ಶೇಕಡಾವಾರು ಅಥವಾ ಅಂಕಿಅಂಶಗಳ ಮೂಲಕ ತಿಳಿಸಲು ಸಾಧ್ಯವಾಗಿಲ್ಲ.

## ಬಡ್ಡಿ ದರಗಳ ಅವಾಂತರ

ಸ್ವಲ್ಪ ವಿವರವಾಗಿ ಪರಿಶೀಲಿಸಿದಾಗ ಆದಾಯ ಸೋರಿಕೆಗೆ ಕಂಡುಬರುವ ಪ್ರಮುಖ ಕಾರಣವೆಂದರೆ ಠೇವಣಿ ಮತ್ತು ಸಾಲದ ಮೇಲಿನ ಬಡ್ಡಿದರಗಳ ಅವಾಂತರ. ಈ ದರಗಳು ಆಗಾಗ್ಗೆ ಕಡಿಮೆ ಕಾಲಾವಧಿಯಲ್ಲೇ ಅನೇಕಬಾರಿ ಬದಲಾಗುತ್ತಿರುವುದು. ಇವು ರಿಸರ್ವ್ ಬ್ಯಾಂಕಿನ ಆದೇಶಗಳಿಗನುಗುಣವಾಗಿರುತ್ತವೆ. ಠೇವಣಿಯ ಮೇಲಿನ ದರಗಳು ಬದಲಾದಾಗ ಅವು ಹಾಲಿ ಇರುವ ಖಾತೆಗಳಿಗೆ ಅನ್ವಯಿಸದೆ, ಜಾರಿಗೆ ಬಂದ ದಿನಾಂಕದ ಅನಂತರ ತೆರೆಯುವ ಖಾತೆಗಳಿಗೆ ಮಾತ್ರವೇ ಅನ್ವಯವಾಗುತ್ತವೆ. ಖಾತೆಯನ್ನು ಪೂರ್ಣ ಅವಧಿಗೆ ಮೊದಲೇ ಮುಕ್ತಾಯ ಮಾಡಬೇಕಾದಂಥ ಸಂದರ್ಭದಲ್ಲಿ ತಪ್ಪು ಗ್ರಹಿಕೆಯಿಂದ ಹೆಚ್ಚಿನ ಬಡ್ಡಿದರ ಪಾವತಿ ಮಾಡುವ ಸಾಧ್ಯತೆಗಳು ಹೆಚ್ಚು. ಇನ್ನು ಸಾಲದ ಖಾತೆಗಳಲ್ಲಿ ಬದಲಾದ ಬಡ್ಡಿದರ, ಹಾಲಿ ಇರುವ ಖಾತೆಗಳಿಗೆ ನಿರ್ದಿಷ್ಟ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುತ್ತದೆ. ಅಲ್ಲದೆ ಅದು ಸಾಲದ ಮೊತ್ತಕ್ಕನುಗುಣವಾಗಿ, ಸಾಲದ ವಲಯ/ಕ್ಷೇತ್ರಕ್ಕನುಗುಣವಾಗಿ ನಿಗದಿಗೊಳಿಸಲ್ಪಟ್ಟಿರುತ್ತದೆ. ಸಾಲದ ವಲಯ/ಕ್ಷೇತ್ರಗಳನ್ನು ವಿಂಗಡಿಸುವಾಗ ಆಗುವ ತಪ್ಪು ಗ್ರಹಿಕೆ ಕಡಿಮೆ ಬಡ್ಡಿಯ ವಸೂಲಾತಿಗೆ ಕಾರಣವಾಗಲೂಬಹುದು. ಈ ರೀತಿಯ ಬಡ್ಡಿ ದರಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಯಾವೊಬ್ಬ ಬ್ಯಾಂಕರನಿಗೂ ಸುತ್ತೋಲೆಗಳನ್ನು ಪರಿಶೀಲಿಸದೆ ಬಡ್ಡಿದರಗಳನ್ನು ಹೇಳುವುದು ಕಷ್ಟಸಾಧ್ಯವಾಗುತ್ತದೆ. ಈಗಿರುವಂತೆ ಬಡ್ಡಿ ದರಗಳ ಸಂತೆಯಲ್ಲಿ (ಉದಾಹರಣೆಗೆ 10, 10.5, 11.50, 12, 12.5, 13, 15, 17.5 ಇತ್ಯಾದಿ.,) ಯಾವ ಖಾತೆಗೆ ಎಷ್ಟು ಬಡ್ಡಿದರ ಎಂಬುದನ್ನು ಹುಡುಕಲೇ ಸಿಬ್ಬಂದಿ ವರ್ಗದ ಬಹಳಷ್ಟು ಸಮಯ ವ್ಯಯವಾಗುತ್ತದೆ. ಅನಂತರ ವಿವಿಧ ರೀತಿಯ ವಿವಿಧ ಖಾತೆಗಳಿಗೆ ಬಡ್ಡಿ ವಿಧಿಸುವ ಕಾರ್ಯದ ಭಾರವನ್ನೂ ಅದರಲ್ಲಿನ ಲೆಕ್ಕಾಚಾರದ ಮಹತ್ವವನ್ನೂ ಯಾರಾದರೂ ಊಹಿಸಬಹುದು. ಇದು ಅನೇಕ ಲೋಪಗಳಿಗೆ, ತಪ್ಪುಗ್ರಹಿಕೆಗಳಿಗೆ ಕಾರಣವಾಗುತ್ತದೆ.

## ತಡೆಗಟ್ಟುವ ಬಗೆ

ಬಡ್ಡಿದರದಲ್ಲಿ ಪದೇಪದೇ ಬದಲಾವಣೆಗಳನ್ನು ತರದಿರುವುದರಿಂದ ಅನೇಕ ಲೋಪಗಳನ್ನು ಸರಿಪಡಿಸಬಹುದು. ಒಂದೇ ಚೌಕಟ್ಟಿನ, ಅವಧಿಯಾಧಾರಿತ ಬಡ್ಡಿದರಗಳನ್ನು ನಿರ್ಧರಿಸುವುದು ಮತ್ತು ಅವನ್ನು ಕನಿಷ್ಠ 5 ವರ್ಷಗಳವರೆಗೆ ಬದಲಾಯಿಸದೆ ಇರುವುದು ಆವಶ್ಯಕವೆನ್ನಿಸುತ್ತದೆ. ಆಗ ಸರ್ಕಾರದ ಹಸ್ತಕ್ಷೇಪವಿರುವ ಇತರ ಠೇವಣಿಗಳ ಬಡ್ಡಿದರಗಳು ಸಹ ಅದೇ ರೀತಿ ಬದಲಾಗದಿರುವಂತೆ ನೋಡಿಕೊಳ್ಳಬೇಕಾಗುತ್ತದೆ. ಆದ್ಯತಾ ವಲಯದ ಸಾಲಗಳಿಗೆ ಒಂದೇ ರೀತಿಯ ಬಡ್ಡಿಯನ್ನು ವಿಧಿಸುವುದು ಮತ್ತು ಆದ್ಯತಾ ವಲಯದ್ದಲ್ಲದ ಸಾಲಗಳಿಗೆ ಸ್ವಲ್ಪ ಹೆಚ್ಚಿನ ಏಕರೀತಿಯ ಬಡ್ಡಿದರವನ್ನು ವಿಧಿಸುವುದೇ ಆದಲ್ಲಿ ಸಾಲದ ಖಾತೆಯ ಅಸಮರ್ಪಕ ವಿಂಗಡಣೆಯಿಂದುಂಟಾಗುವ ಲೋಪಗಳನ್ನು ಸರಿಪಡಿಸಬಹುದು. ಒಬ್ಬ ವ್ಯಕ್ತಿಗೆ ಅಥವಾ ಒಂದು ಘಟಕಕ್ಕೆ ಅವಧಿ ಸಾಲ ಹಾಗೂ ಬಂಡವಾಳ ಸಾಲಗಳೆರಡನ್ನೂ ನೀಡಿದಾಗ, ಅವಧಿ ಸಾಲ ಜಾರಿಯಲ್ಲಿರುವಾಗಲೇ ಬಂಡವಾಳ ಸಾಲದ ಮಿತಿಯನ್ನು ಹೆಚ್ಚು ಮಾಡಿದಾಗ ಒಟ್ಟು ಸಾಲದ ಮೊತ್ತ ಹೆಚ್ಚಾಗಿ ಬಡ್ಡಿದರದ ಹೆಚ್ಚಳ ವುಂಟಾಗುತ್ತದೆ. ಹೆಚ್ಚಳವನ್ನು ಇಲ್ಲಿ ಕೇವಲ ಬಂಡವಾಳ ಸಾಲಕ್ಕೆ ಅನ್ವಯಿಸಿ, ಅವಧಿ ಸಾಲಕ್ಕೆ ಅನ್ವಯಿಸದಿರುವುದೇ ಹೆಚ್ಚು. ಅವಧಿ ಸಾಲಕ್ಕೂ ಬಂಡವಾಳ ಸಾಲಕ್ಕೂ ಏಕರೀತಿಯ ಬಡ್ಡಿದರವನ್ನು ವಿಧಿಸುವುದರಿಂದ ಈ ರೀತಿಯ ತಪ್ಪುಗಳನ್ನು ಸರಿಪಡಿಸಬಹುದು.

ಯೋಜಿತ ರೀತಿಯಲ್ಲಿ ಕೆಲಸ ನಿರ್ವಹಿಸುವುದರಿಂದ ಕೆಲವು ತಪ್ಪುಗಳಾಗಲು ಅವಕಾಶವಾಗುವುದಿಲ್ಲ. ಈಗ ಬ್ಯಾಂಕುಗಳು ಆರು ತಿಂಗಳಿಗೊಮ್ಮೆ ತಮ್ಮಲ್ಲಿನ ಉಳಿತಾಯ ಖಾತೆಗಳಿಗೆ ಬಡ್ಡಿಯನ್ನು ನೀಡುತ್ತವೆ. ಆದರೆ ಅವು ಇನ್ನೊಂದು ವಾರದಲ್ಲಿ ಬಡ್ಡಿ ನೀಡಬೇಕು ಎಂದಾಗ ಅವಸರವಸರವಾಗಿ, ಕಳೆದ ಆರು ತಿಂಗಳ, ಬಡ್ಡಿಗೆ ಯೋಗ್ಯವಾದ ಶಿಲ್ಕನ್ನು (ಉತ್ಪನ್ನಗಳನ್ನು) ಲೆಕ್ಕಾಚಾರ ಮಾಡಿ ಬಡ್ಡಿ ನೀಡಬೇಕಾಗುತ್ತದೆ. ಅದು ಕೊನೇ ಗಳಿಗೆಯ ಕಾರ್ಯವಾಗಿ ತಪ್ಪುಗಳಾಗುವ ಸಾಧ್ಯತೆಗಳು ಬಹಳ ಹೆಚ್ಚು. ಇನ್ನು ಸಿಬ್ಬಂದಿಯ ಕೆಲಸಗಳನ್ನು ತಪಾಸಿಸುವ ಅಧಿಕಾರಿಗಳು ಸಹ ಬೇರೆ ಕೆಲಸ ಕಾರ್ಯಗಳ ಒತ್ತಡದಿಂದ ಅಥವಾ ಸಮಯಾಭಾವದಿಂದ ಅಥವಾ ತಮ್ಮ ಸಿಬ್ಬಂದಿಯ ಕಾರ್ಯಕ್ಷಮತೆಯ ಭರವಸೆಯ ಮೇಲೆ ಸರಿಯಾಗಿ ತಪಾಸಿಸದೆ ಇರುವ ಸಂದರ್ಭಗಳೇ ಹೆಚ್ಚು. ಇದರಿಂದ ಹೆಚ್ಚಿನ ಬಡ್ಡಿ ಪಾವತಿಯಾದಂಥ ಸಂದರ್ಭಗಳಲ್ಲಿ ಅವರೂ ಸಹ ಆದಾಯ ಸೋರಿಕೆಯನ್ನು ಗುರುತಿಸಲಾರದವರಾಗುತ್ತಾರೆ. ಅಂತೆಯೇ, ಸಾಲದ ಖಾತೆಗಳಲ್ಲಿಯೂ ಮೂರು/ಆರು ತಿಂಗಳುಗಳಿಗೊಮ್ಮೆ ಬಡ್ಡಿ ಹಾಕುವಾಗಿನ ಅವಾಂತರ ಏತಕ್ಕೂ ಬೇಡ. ಪ್ರತೀ ದಿನದ ಶಿಲ್ಕಿನ ಉತ್ಪನ್ನಗಳನ್ನು ಲೆಕ್ಕ ಹಾಕಬೇಕಾಗುತ್ತದೆ. ನಗದಿ ಸಾಲ, ಮೀರೆಳತಗಳ ವಿಚಾರದಲ್ಲಿಯಂತೂ ಬಹಳ ಕಷ್ಟವಾಗುತ್ತದೆ. ಇಲ್ಲಿ ಬಡ್ಡಿ ವಸೂಲು ಮಾಡುವಾಗ ಕಡಿಮೆಯಾಗುವ ಸಾಧ್ಯತೆಗಳುಂಟು. ದಿನವೂ ಅಥವಾ ವಾರಕ್ಕೊಮ್ಮೆಯಾದರೂ ಸಾಲದ ಖಾತೆಗಳಲ್ಲಿ ಉತ್ಪನ್ನಗಳ ಲೆಕ್ಕಾಚಾರ ಮಾಡುವುದು ಕೊನೇಗಳಿಗೆಯ ಕಷ್ಟವನ್ನು ತಪ್ಪಿಸುವುದಷ್ಟೇ ಅಲ್ಲದೆ, ಆದಾಯ ಸೋರಿಕೆಯನ್ನು ತಡೆಗಟ್ಟುವಲ್ಲಿ ಸಹಾಯಕವಾಗುತ್ತದೆ. ತಿಂಗಳು ಮುಗಿದ ತಕ್ಷಣವೇ ಬಡ್ಡಿಗೆ ಯೋಗ್ಯವಾದ ಶಿಲ್ಕನ್ನು (ಉತ್ಪನ್ನಗಳನ್ನು) ಉಳಿತಾಯ ಖಾತೆಗಳಲ್ಲಿ ಬರೆಯಬೇಕು. ಕೆಲವು ಸಣ್ಣ ಪುಟ್ಟ ವ್ಯತ್ಯಾಸಗಳಿದ್ದಲ್ಲಿ ಅವನ್ನು ತಕ್ಷಣವೇ ಬಗೆಹರಿಸಿಕೊಳ್ಳದಿದ್ದಲ್ಲಿ ಅನಂತರದ ದಿನಗಳಲ್ಲಿ ಅನೇಕ ಕಾರಣಗಳಿಂದ ಸಾಧ್ಯವಾಗುವುದೇ ಇಲ್ಲ. ಯಾವುದೇ ವ್ಯಕ್ತಿಯ ಖಾತೆಗೆ ಹೆಚ್ಚು ಬಡ್ಡಿ ನೀಡಿದರೆ ಅದನ್ನು ಸರಿಪಡಿಸುವಾಗ/ವಸೂಲು ಮಾಡುವಾಗ ಅನೇಕ ತೊಂದರೆಗಳಾಗುತ್ತವೆ. ಆ ವ್ಯಕ್ತಿಯ ಮರಣ, ದಿವಾಳಿಯಾಗುವಿಕೆ ಅಥವಾ ಅವನ ವಿಳಾಸ ಬದಲಾಗಿ ಸರಿಯಾದ ಮಾಹಿತಿ ದೊರೆಯದಿರುವಿಕೆಗಳು ಕಾರಣವಾಗಿ ವಸೂಲಾತಿ ಕಷ್ಟವಾಗಬಹುದು. ಇಲ್ಲವೇ ಕೆಲವೊಮ್ಮೆ ಅದನ್ನು ವಸೂಲು ಮಾಡಲು ಆಗುವ ಖರ್ಚು ಅದರಿಂದ ಉಂಟಾದ ಆದಾಯ ಸೋರಿಕೆಗಿಂತ ಹೆಚ್ಚಾಗಬಹುದು.

ಸಾಲ ಮುಂಗಡಗಳ ಸಂಖ್ಯೆ ಅಥವಾ ಮೊತ್ತಕ್ಕಿಂತ ಅವುಗಳ ಗುಣಮಟ್ಟದ ಕಡೆ ಹೆಚ್ಚಿನ ಗಮನ ಹರಿಸಬೇಕಾಗುತ್ತದೆ. ಸಾಲದ ಮೇಲಿನ ಬಡ್ಡಿ ವಿಧಿಸುವಿಕೆ ಅಸಮರ್ಪಕವಾಗುತ್ತಿದೆಯೆನ್ನುವ ಈ ಸಮಯದಲ್ಲೇ ನಾವು ಕೊಟ್ಟ ಸಾಲದ ಅಸಲೇ ಕೆಟ್ಟು ಹೋಗುತ್ತಿರುವುದರ ಬಗ್ಗೆಯೂ ಗಮನಿಸಬೇಕಾಗಿದೆ.

## ಸಿಬ್ಬಂದಿಯ ಹೊಣೆಗಾರಿಕೆ

ಸಂಬಂಧಪಟ್ಟ ಸಿಬ್ಬಂದಿಯನ್ನು ಅವರಿಂದ ಉಂಟಾಗುವ ನಷ್ಟಕ್ಕೆ ಹೊಣೆಗಾರರನ್ನಾಗಿ ಮಾಡಿದಲ್ಲಿ ಅದು ಸಿಬ್ಬಂದಿ ಹೆಚ್ಚಿನ ರೀತಿಯಲ್ಲಿ ಜಾಗರೂಕರಾಗಿರುವಂತೆ ಮಾಡುತ್ತದೆ. ಇದು ಎಲ್ಲ ವರ್ಗದ ಸಿಬ್ಬಂದಿಯ ಕರ್ತವ್ಯ ನಿರ್ವಹಣೆಯಲ್ಲಿನ ಲೋಪವನ್ನು ಕುಂಠಿತಗೊಳಿಸುತ್ತದೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇತ್ತೀಚೆಗೆ ಬಳಕೆಗೆ ಬರುತ್ತಿರುವ ಖಾತಾ ನಮೂದು ಯಂತ್ರಗಳು, ಗಣಕಗಳು ಅನೇಕಲೋಪಗಳನ್ನು ತಡೆಯುವುದರಲ್ಲಿ ಯಶಸ್ವಿಯಾಗಿವೆ. ಇವುಗಳ ಸಮಯೋಚಿತ ಬಳಕೆ ಆದಾಯ ಸೋರಿಕೆಯ ತಡೆಗಟ್ಟುವಿಕೆಗೆ ಸಹಾಯಕವಾಗಬಲ್ಲದು. ಹಾಲಿ ಇರುವ ಸಿಬ್ಬಂದಿಗಳಲ್ಲಿ ಇತ್ತೀಚಿನ ದಿನಗಳಲ್ಲಿ ಕ್ಷೀಣಿಸುತ್ತಿರುವಂತೆ ಭಾಸವಾಗುವ ದಕ್ಷತೆ, ಕಾರ್ಯಕ್ಷಮತೆಗಳನ್ನು ಹೆಚ್ಚಿಸುವ ಕಾರ್ಯಗಳಾಗಬೇಕು. ಉತ್ಪಾದಕತಾ ಮಟ್ಟ ಉತ್ತಮಗೊಳ್ಳಬೇಕು. ಕಾರ್ಯಕ್ಷಮತೆಯ ಮಟ್ಟ ಕುಂಠಿತವಾದಾಗ ಅಸಮರ್ಪಕತೆ, ತಪ್ಪುಗಳ ಹೆಚ್ಚಳ ಉಂಟಾಗಿ ಬ್ಯಾಂಕುಗಳಲ್ಲಿ ಆದಾಯ ಸೋರಿಕೆ ಸಂಚಯಿತವಾಗುತ್ತಾಹೋದರೆ ಆಶ್ಚರ್ಯವೇನಿಲ್ಲ.

ಬೃಹತ್ ಬೆಳವಣಿಗೆ ಹೊಂದಿ ದೇಶಾದ್ಯಂತ ಸುಮಾರು 53,000 ಶಾಖೆಗಳನ್ನು ಹೊಂದಿರುವ ಬ್ಯಾಂಕಿಂಗ್ ಉದ್ಯಮದ ಎಲ್ಲ ಸಿಬ್ಬಂದಿಗಳಿಗೆ ತರಬೇತಿ ದೊರೆಯುತ್ತಿದೆಯೇ, ಇದ್ದರೆ ಅದರ

[30ನೆಯ ಪುಟದ 1ನೆ ಅಂಕಣ ನೋಡಿ

# ಬ್ಯಾಂಕಿಂಗ್ ಸುದ್ದಿಸಾರ

ಕೆ. ಎನ್. ಮಹಾಬಲ

## ವ್ಯಾಪಾರ ಶಿಲ್ಕು ಪರಿಸ್ಥಿತಿ

ಕೇಂದ್ರ ವಾಣಿಜ್ಯ ಮಂತ್ರಾಲಯದ ಪ್ರಕಾರ ಚಾಲ್ತಿ ಆರ್ಥಿಕ ವರ್ಷದ ಮೊದಲರ್ಧದಲ್ಲಿ ಭಾರತದ ವ್ಯಾಪಾರ ಶಿಲ್ಕು ರೂ. 742.43 ಕೋಟಿಯಷ್ಟು ಹೆಚ್ಚಿ ಖೋತಾ ಪ್ರಮಾಣ ಗಣನೀಯವಾಗಿ ತಗ್ಗಿತು.

ರಫ್ತು ಒಟ್ಟು ರೂ. 5,85,744 ಕೋಟಿ ಮತ್ತು ಆಮದು ರೂ. 9,239.01 ಕೋಟಿ ಇದ್ದುವು. ರಫ್ತು ಪ್ರಮಾಣದಲ್ಲಿ ಶೇ. 17ರ ಹೆಚ್ಚಳ ಮತ್ತು ಆಮದು ಪ್ರಮಾಣದಲ್ಲಿ ಸ್ಥಿರತೆ (ಕೇವಲ ಶೇ. 1ರಷ್ಟು ಏರಿಕೆ) ಈ ಸುಧಾರಿಸಿದ ಪರಿಸ್ಥಿತಿಗೆ ಕಾರಣವೆನ್ನಲಾಗಿದೆ.

## ಯೂನಿಟ್ ಸಂಬಂಧಿತ ವಿಮಾಯೋಜನೆ

ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಇತ್ತೀಚೆಗೆ ಯೂನಿಟ್ ಸಂಬಂಧಿತ ವಿಮಾಯೋಜನೆಯ (U L I P) ಗರಿಷ್ಠ ಮೊತ್ತವನ್ನು ರೂ. 30,000 ಗಳಿಂದ ರೂ. 60,000ಗೆ ಏರಿಸಲು ತೀರ್ಮಾನಿಸಿದೆ. ವಯೋಮಿತಿಯ ವಿಷಯದಲ್ಲೂ ಕೆಲವೊಂದು ಬದಲಾವಣೆಗಳನ್ನು ಮಾಡಲಾಗಿದೆ. ಹತ್ತು ವರ್ಷದ ಸದಸ್ಯತ್ವಕ್ಕೆ ಈಗಿನ 45 ವರ್ಷದಿಂದ 50 ವರ್ಷಕ್ಕೆ ವಯೋಮಿತಿ ಏರಿಸಲಾಗಿದೆ. 15 ವರ್ಷದ ಸದಸ್ಯತ್ವಕ್ಕೆ ಈಗಿರುವಂತೆಯೇ 45 ವರ್ಷಗಳ ಗರಿಷ್ಠ ವಯೋಮಿತಿ ಮುಂದುವರಿಯುತ್ತದೆ.

## ಕೆನರಾ ಬ್ಯಾಂಕ್ ಗುತ್ತಿಗೆ ಕಂಪನಿ ಸ್ಥಾಪನೆ

ಗುತ್ತಿಗೆ ಸಹಾಯಕ ಕಂಪನಿಯೊಂದನ್ನು (Leasing Subsidiary Company) ಹುಟ್ಟು ಹಾಕಿರುವ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಕೆನರಾ ಬ್ಯಾಂಕ್ ಮೊಟ್ಟಮೊದಲನೆಯದಾಗಿದೆ. (ಭಾರತೀಯ ಸ್ಟೇಟ್ ಬ್ಯಾಂಕ್‌ನ ಎಸ್‌ಬಿಐ ಕ್ಯಾಪಿಟಲ್ ಮಾರ್ಕೆಟ್ಸ್ ಈಗಾಗಲೇ ಕಾರ್ಯಪ್ರವೃತ್ತವಾಗಿದೆ) 'ಕ್ಯಾನ್ ಬ್ಯಾಂಕ್ ಲೀಸಿಂಗ್' ಎಂದು ಕರೆಯಲಾಗಿರುವ ಈ ಹೊಸ ಗುತ್ತಿಗೆ ಕಂಪನಿಯು ರೂ. 10 ಕೋಟಿ ಬಂಡವಾಳದ ಬುನಾದಿಯನ್ನು ಹೊಂದಿದೆ. ಗುತ್ತಿಗೆ ಕಾರ್ಯಾಚರಣೆಗಳು, ವಣಿಕ ಬ್ಯಾಂಕಿಂಗ್, ಅನಿವಾಸಿ ಭಾರತೀಯರ ವಿನಿಯೋಜನೆ, ವಿನಿಯೋಜನಾಸ್ಥಿತಿ ಕುರಿತ ವಾರ್ತಾಪತ್ರವೊಂದರ ಪ್ರಕಟಣೆ, ಷೇರು ಸಂಸ್ಕರಣ ವಿಭಾಗದ ಸ್ಥಾಪನೆ—ಮುಂತಾದುವು ಈ ಗುತ್ತಿಗೆ ಕಂಪನಿಯ ಕಾರ್ಯವ್ಯಾಪ್ತಿಯಲ್ಲಿವೆ.

## ವಿದೇಶೀ ವಿನಿಮಯ ವಹಿವಾಟು : ಲಂಡನ್ ಮುಂಚೂಣಿಯಲ್ಲಿ

ವಿದೇಶೀ ವಿನಿಮಯ ವಹಿವಾಟಿನಲ್ಲಿ ಲಂಡನ್ ವಿಶ್ವದಲ್ಲೇ ಪ್ರಮುಖವಾದ ಸ್ಥಾನ ಹೊಂದಿದೆ. ಇತ್ತೀಚಿನ ಸಮೀಕ್ಷೆಯೊಂದರಂತೆ ಸರಾಸರಿ ವಹಿವಾಟು ದಿನವೊಂದಕ್ಕೆ 90 ಬಿಲಿಯನ್ ಡಾಲರ್‌ಗಳಿದ್ದವು. ನ್ಯೂಯಾರ್ಕ್ 50 ಬಿಲಿಯನ್, ಟೋಕಿಯೋ 48 ಬಿಲಿಯನ್‌ಗಳಿಂದ ನಂತರದ ಸ್ಥಾನಗಳನ್ನು ಪಡೆದವು.

ಲಂಡನ್ ನಗರದ ಈ ಹೆಗ್ಗಳಿಕೆಗೆ ಅದು ಅನುಕೂಲಕರ ಕಾಲವಲಯದಲ್ಲಿರುವುದು (Time zone), ಇಂಗ್ಲಿಷನ್ನು ಮುಖ್ಯ ವ್ಯವಹಾರ ಭಾಷೆಯನ್ನಾಗಿ ಹೊಂದಿರುವುದು, ಲಂಡನ್ ವ್ಯಾಪಾರಿಗಳ ಕೌಶಲ, ಆಳವಾಗಿ ರೂಪುಗೊಂಡಿರುವ ಅಲ್ಲಿನ ಮಾರುಕಟ್ಟೆಗಳು, ಅಲ್ಲಿರುವ ನಿಯಂತ್ರಣದ ವಾತಾವರಣ—ಇವೆಲ್ಲ ಕಾರಣವೆನ್ನಲಾಗಿದೆ.

## ವಿಶ್ವ ಬ್ಯಾಂಕ್ ಬಡ್ಡಿದರ

8–1–87ರಿಂದ ಅನ್ವಯವಾಗುವಂತೆ ಅಭಿವೃದ್ಧಿಶೀಲ ದೇಶಗಳಿಗೆ ನೀಡುವ ಸಾಲಗಳ ಮೇಲಿನ ಬಡ್ಡಿದರವನ್ನು ವಿಶ್ವ ಬ್ಯಾಂಕ್ ಶೇಕಡ 8.23ರಿಂದ ಶೇಕಡ 7.92ಕ್ಕೆ ಇಳಿಸಿದೆ.

## ದಕ್ಷಿಣ ಆಫ್ರಿಕಾ: ಬಾರ್ಕ್‌ಲೇಸ್ ಬ್ಯಾಂಕ್ ವಿನಿಯೋಜನೆಯಲ್ಲಿ ನಿರಾಸಕ್ತಿ

ಬಾರ್ಕ್‌ಲೇಸ್ ಬ್ಯಾಂಕ್ ದಕ್ಷಿಣ ಆಫ್ರಿಕಾದಲ್ಲಿನ ತಮ್ಮ ವಿನಿಯೋಜನೆಯನ್ನು ಹಿಂತೆಗೆದುಕೊಳ್ಳಲು ನಿರ್ಧರಿಸಿದೆ. ದೇಶದ ದೊಡ್ಡ ಬ್ಯಾಂಕ್ ಆಗಿ, ಸಾವಿರ ಶಾಖೆಗಳನ್ನೂ 25,000 ಉದ್ಯೋಗಿಗಳನ್ನೂ ಬಾರ್ಕ್‌ಲೇಸ್ ಬ್ಯಾಂಕ್ ದಕ್ಷಿಣ ಆಫ್ರಿಕಾದಲ್ಲಿ ಹೊಂದಿದೆ. 148 ವರುಷಗಳಿಂದ ದಕ್ಷಿಣ ಆಫ್ರಿಕಾದಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸುತ್ತಿರುವ ಬಾರ್ಕ್‌ಲೇಸ್ ಬ್ಯಾಂಕಿನ ಈ ನಿರ್ಧಾರ ದಕ್ಷಿಣ ಆಫ್ರಿಕಾಕ್ಕೆ ಆಘಾತ ನೀಡಬಲ್ಲದೆನ್ನಲಾಗಿದೆ.

## ವಿಶ್ವ ವ್ಯಾಪಾರ ದೃಶ್ಯ, 1985-86

ಸುಂಕ ಮತ್ತು ವ್ಯಾಪಾರ ಕುರಿತ ಸಾರ್ವತ್ರಿಕ ಒಪ್ಪಂದದ (GATT) 1985–86ರ ವರದಿಯ ಪ್ರಕಾರ 1985ರಲ್ಲಿ ವಿಶ್ವ ವ್ಯಾಪಾರದ ಪ್ರಮಾಣದಲ್ಲಿ ಶೇ. 3 ಏರಿಕೆ ಕಂಡುಬಂದಿದೆ. 1984ರಲ್ಲಿ ಈ ಏರಿಕೆ ಶೇ. 95 ಇತ್ತು. ಒಟ್ಟು ವ್ಯಾಪಾರದ ಮೌಲ್ಯದಲ್ಲಿ ಶೇ. 1 ಹೆಚ್ಚಳ ಕಂಡಬಂದಿತು (1984ರಲ್ಲಿ ಇದು ಶೇಕಡ 5.5 ಇತ್ತು).

ಅಭಿವೃದ್ಧಿಶೀಲ ದೇಶಗಳ ರಫ್ತು ಆದಾಯದಲ್ಲಿ ಶೇ. 5.5ರಷ್ಟು ಕುಸಿತ ಕಂಡುಬಂದಿತು. ಹಾಗೆಯೇ ಆ ದೇಶಗಳ ಆಮದು ಮೌಲ್ಯ ಶೇಕಡ 6.5 ರಷ್ಟು ಇಳಿಯಿತು. ಅಭಿವೃದ್ಧಿಶೀಲ ದೇಶಗಳ ವ್ಯಾಪಾರ ಶಿಲ್ಕಿನಲ್ಲಿ 100 ಬಿಲಿಯನ್ ಡಾಲರ್‌ಗಳ ಖೋತಾ ಕಂಡುಬಂತು.

ವರದಿಯ ಪ್ರಕಾರ 1985ರಲ್ಲಿ ವಿಶ್ವವ್ಯಾಪಾರ ರಂಗದ ಎರಡು ಎದ್ದು ಕಾಣುವ ಅಂಶಗಳೆಂದರೆ ಒಂದು, ಅಭಿವೃದ್ಧಿಶೀಲ ದೇಶಗಳ ವ್ಯಾಪಾರ ಸಾಧನೆಯಲ್ಲಿ ಕುಸಿತ, ಮತ್ತೊಂದು ಬೃಹತ್ ಕೈಗಾರಿಕಾ ದೇಶಗಳಲ್ಲಿ ಕಂಡುಬಂದಿರುವ ವ್ಯಾಪಾರ ಅಸಮತೋಲ.

ಮಾರ್ಚ್ 85 ಮತ್ತು 86ರ ನಡುವಣ ಅವಧಿಯಲ್ಲಿ ಡಾಲರ್‌ನ ವಾಸ್ತವ ವಿನಿಮಯ ದರ ಶೇ. 22ರ ಇಳಿಕೆಯನ್ನು ಕಂಡಿದ್ದರೆ ಯೆನ್ ಶೇ. 28 ಏರಿಕೆಯನ್ನೂ ಮಾರ್ಕ್ ಶೇಕಡ 6 ಹೆಚ್ಚಳವನ್ನೂ ಕಂಡವು.

## ರಾಷ್ಟ್ರೀಯ ವರಮಾನ, ಉಳಿತಾಯ, ವಿನಿಯೋಜನೆ, 1985-86ರ ಚಿತ್ರ

ಕೇಂದ್ರೀಯ ಸಂಖ್ಯಾಶಾಸ್ತ್ರ ಸಂಸ್ಥೆಯ (Central Statistical Organisation CSO) ಕ್ಷಿಪ್ರ ಅಂದಾಜಿನಂತೆ 1985–86ರಲ್ಲಿ ರಾಷ್ಟ್ರೀಯ ವರಮಾನ ಶೇ. 5.1ರ ಬೆಳವಣಿಗೆ ಪಡೆದಿತ್ತು (1984–85ರಲ್ಲಿ ಇದು ಶೇ. 3.5 ಇತ್ತು) 1970–71ರ ಸ್ಥಿರ ವರ್ಷದ ಆಧಾರದಂತೆ ರಾಷ್ಟ್ರೀಯ ವರಮಾನದ ಒಟ್ಟು ಮೊತ್ತ ಸುಮಾರು ರೂ. 60,143 ಕೋಟಿ. (1984–85ರಲ್ಲಿ ರೂ. 57,243 ಕೋಟಿ). ಚಾಲ್ತಿ ಬೆಲೆಗಳಲ್ಲಿ ರಾಷ್ಟ್ರೀಯ ವರಮಾನ ರೂ. 1,95,707 ಆಗಿತ್ತು (ಚಾಲ್ತಿ ಬೆಲೆಯ ಪ್ರಕಾರ ಸುಮಾರು 2595.6) ಇದು 1984–85ರ ಮಟ್ಟಕ್ಕಿಂತ ಶೇಕಡ 3 ಹೆಚ್ಚು.

# ಗ್ರಾಹಕ ಸೇವೆ— ಹೊಸ ಸವಾಲುಗಳು

**ವೇಗದ, ಪೈಪೋಟಿಯ ಈ ಯುಗದಲ್ಲಿ ನಮ್ಮ ಬ್ಯಾಂಕುಗಳು ಉಳಿದು ಬೆಳೆಯಬೇಕಾದರೆ ಗ್ರಾಹಕ ಸೇವೆಗೆ ಅಗ್ರಮಾನ್ಯತೆ ನೀಡುವುದು ಅತ್ಯಗತ್ಯ. ಆದರೆ ಹೇಗೆ....?**

ಗ್ರಾಹಕ ಸೇವೆ ಗ್ರಾಹಕನಷ್ಟೇ ಹಳೆಯ ಪದ. ಆದರೆ ಇದು ಎಸೆಯುತ್ತಿರುವ ಹೊಸ ಸವಾಲುಗಳನ್ನು ಎದುರಿಸಲು ಬ್ಯಾಂಕುಗಳು ಎಲ್ಲ ಬಗೆಯಲ್ಲಿ ಸಜ್ಜಾಗಬೇಕಿದೆ. ಇದಕ್ಕೆ ಮುಖ್ಯ ಕಾರಣ ಬ್ಯಾಂಕುಗಳಲ್ಲಿ ಇರುವ ಪರಸ್ಪರ ಪೈಪೋಟಿ. ಬ್ಯಾಂಕೊಂದು ಅಂಚೆ ಕಛೇರಿ ಆಗಿದ್ದಿದ್ದರೆ ಅಂತರ್ದೇಶೀ ಪತ್ರ ಖರ್ಚಾಗಲಿಲ್ಲವೆಂದು ಬ್ಯಾಂಕರ್ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಪರಸ್ಪರ ಪೈಪೋಟಿ ಇರುವ ಕ್ಷೇತ್ರದಲ್ಲಿ ವಸ್ತುವೊಂದು ಮಾರಾಟ ಆಗಬೇಕಾದರೆ ಆ ವಸ್ತುವಿನ ಬಗ್ಗೆ ಪ್ರಚಾರ, ಅದನ್ನು ಪಡೆಯಲು ಬರುವ ಗಿರಾಕಿಗೆ ಮನವೊಲಿಸುವ ರೀತಿ ಹಾಗೂ ಮಾರಾಟಾನಂತರದ ಸೇವೆ ಮುಖ್ಯ. ಪ್ರತಿಯೊಬ್ಬ ಗ್ರಾಹಕನೂ ತನಗೆ ಹೆಚ್ಚು ಸೌಲಭ್ಯ ದೊರೆಯಬಹುದಾದ ಬ್ಯಾಂಕಿಗೇ ಹೋಗುವುದು ಸಹಜ. ಸೌಲಭ್ಯ ಕಡಿಮೆ ಎನ್ನಿಸಿದಲ್ಲಿ ಬ್ಯಾಂಕಿಂದ ಬ್ಯಾಂಕಿಗೆ ಹಾರಬಲ್ಲ ಗ್ರಾಹಕ ಸರ್ವಸ್ವತಂತ್ರ. ಅವನ ಪಕ್ಷಾಂತರವನ್ನು ತಡೆಯಲು ಯಾವ ಕಾಯಿದೆಯಿಂದಲೂ ಸಾಧ್ಯವಿಲ್ಲ.

## ಗ್ರಾಹಕ ಚಳವಳಿ

ಗ್ರಾಹಕ ತನಗೆ ಬ್ಯಾಂಕಿಂದ ದೊರೆಯಬೇಕಾದ ಸವಲತ್ತುಗಳ ಬಗ್ಗೆ, ವಿವಿಧ ಸೇವೆಗಳ ಬಗ್ಗೆ ಇಂದು ಬ್ಯಾಂಕರನಿಗಿಂತಲೂ ಹೆಚ್ಚು ಬಲ್ಲವನಾಗಿದ್ದಾನೆ. ಗ್ರಾಹಕ ಚಳವಳಿ ಒಂದು ಸ್ಪಷ್ಟ ರೂಪದಲ್ಲಿ ಇತ್ತೀಚೆಗೆ ಕಾಣಿಸಿಕೊಂಡಿದೆ. ರಾಷ್ಟ್ರೀಯ ಮಟ್ಟದಲ್ಲಿ ಠೇವಣಿದಾರರ ಸಂಘಗಳೂ ಸ್ಥಾಪಿತವಾಗಿವೆ. ಗ್ರಾಹಕ ತನ್ನ ಸವಲತ್ತುಗಳನ್ನು ಪಡೆಯಲು ಯಾವ ಮಟ್ಟದ ಚಳವಳಿಗೂ ಸಿದ್ಧ ಎಂಬುದಕ್ಕೆ ಇಲ್ಲೊಂದು ನಿದರ್ಶನ: ನಗರವೊಂದರಲ್ಲಿ ಬ್ಯಾಂಕೊಂದರ ದೊಡ್ಡ ಶಾಖೆ. ಅಲ್ಲಿನ ನೌಕರರು ಯಾವುದೋ ಆಂತರಿಕ ಸಮಸ್ಯೆಗಳ ಪರಿಹಾರಾರ್ಥ ಮುಷ್ಕರದಲ್ಲಿ ತೊಡಗಿ ನಿಧಾನ ತಂತ್ರ ಅನುಸರಿಸಿ ನಿಯಮಾನುಸಾರ (ಅಂದರೆ ಅವರ ನಿಯಮಾನುಸಾರ) ಕೆಲಸ ಮಾಡಲು ತೊಡಗಿ ಗ್ರಾಹಕರಿಗೆ ತಡ ಮಾಡುತ್ತಿದ್ದ ಸಮಯ. ಇದನ್ನು ಕಂಡ ಕೆಲವು ಗ್ರಾಹಕರು ಸಿಟ್ಟಾದರು, ಒಟ್ಟಾದರು. ಬ್ಯಾಂಕ್ ನೌಕರರ ಈ ವಿಳಂಬ ನೀತಿಯ ವಿರುದ್ಧ ಸಿಡಿದೆದ್ದು, ಬ್ಯಾಡ್ಜುಗಳನ್ನು ಧರಿಸಿಕೊಂಡು ನೌಕರರಿಗೆ ಧಿಕ್ಕಾರ ಹಾಕಿದ್ದಲ್ಲದೆ ಬ್ಯಾಂಕಿಗೆ ಬರುವ ಎಲ್ಲ ಗ್ರಾಹಕರಿಗೂ ಈ ವಿಳಂಬ ನೀತಿಯ ಬಗ್ಗೆ ಮನದಟ್ಟು ಮಾಡಿಸಿ ಜನರನ್ನು ಬ್ಯಾಂಕಿನ ವಿರುದ್ಧ ಎತ್ತಿಕಟ್ಟುವಲ್ಲಿ ಸಫಲರಾದರು. ಆಂತರಿಕ ಸಮಸ್ಯೆಗಳಿಗಾಗಿ ಗ್ರಾಹಕರಿಗೆ ತೊಂದರೆ ನೀಡುವ ಪರಿಗೆ ಬಹಿಷ್ಕಾರ ಹಾಕಿ, ಇದು ಹೀಗೇ ಮುಂದುವರಿದಲ್ಲಿ ಎಲ್ಲ ಮಂದಿಯ ಖಾತೆಗಳನ್ನು ಹಿಂತೆಗೆದುಕೊಳ್ಳುವುದಾಗಿ ಬೆದರಿಸುವ ಮಟ್ಟಕ್ಕೆ ಹೋಗಿದ್ದರು.

ಅಂದ ಮೇಲೆ ಎಚ್ಚೆತ್ತ ಗ್ರಾಹಕನ ಜೊತೆ ವ್ಯವಹರಿಸಬೇಕಾದ ಈ ಕಾಲದಲ್ಲಿ ಬ್ಯಾಂಕರ್ ತನ್ನ ಸಂಸ್ಥೆಯ ಹಿತಾಸಕ್ತಿ ಕಡೆಗಣಿಸುವಂತಿಲ್ಲ.

ಗ್ರಾಹಕನೇ ಬ್ಯಾಂಕಿನ ಜೀವನಾಡಿ. ಈ ಜೀವನಾಡಿಯ ಮಿಡಿತ ಕ್ರಮಬದ್ಧವಾಗಿರಲು, ಲಯಬದ್ಧವಾಗಿರಲು ಕುಂದುಕೊರತೆಗಳ ತೊಂದರೆ ತಪ್ಪಬೇಕು. ಎಲ್ಲ ಬ್ಯಾಂಕುಗಳು ತಿಂಗಳಲ್ಲಿ ಒಂದೆರಡು ದಿನ ಸಲಹೆ/ದೂರು ಸ್ವೀಕರಿಸಲು ಗ್ರಾಹಕರನ್ನು ಬರಮಾಡಿಕೊಳ್ಳುತ್ತಿವೆ. ಗ್ರಾಹಕ ಬ್ಯಾಂಕಿನ ಅತಿ ಹಿರಿಯ ಅಧಿಕಾರಿಯನ್ನೇ ಭೇಟಿ ಮಾಡಿ ತನ್ನ ಕುಂದುಕೊರತೆಗಳನ್ನು ಹೇಳಿಕೊಳ್ಳಲು ಈಗ ಮುಕ್ತ ಅವಕಾಶವಿದೆ.

ಇದು ವೇಗಯುಗ. ಕಾಲದ ವೇಗದೊಡನೆ ಸ್ಪರ್ಧೆ ಹೂಡಿರುವ ಗ್ರಾಹಕ ಕುದುರೆ ಹತ್ತಿ ಬರುವುದೇ ಹೆಚ್ಚು. ಅವನು ನೀಡುವ ಚೆಕ್ಕುಗಳು ತತ್‌ಕ್ಷಣ ಜಮೆ ಆಗಬೇಕು. ಪರಊರಿನ ಚೆಕ್ಕುಗಳನ್ನು ವಿಳಂಬವಿಲ್ಲದೆ ವಸೂಲಿ ಮಾಡಿಕೊಡಬೇಕು. ಬ್ಯಾಂಕರ್ ವಾಯುದೂತನನ್ನು ಅವಲಂಬಿಸುತ್ತಾನೋ, ಹನುಮದೂತನ ಮೂಲಕ ಶೀಘ್ರ ಚೆಕ್ ವಿಲೇವಾರಿ ಮಾಡುತ್ತಾನೋ—ಅದು ಗ್ರಾಹಕನಿಗೆ ಬೇಡ. ಅವನಿಗೆ ಬೇಕಿರುವುದು ಶೀಘ್ರ ಸೇವೆ ಮಾತ್ರ. ರಾಷ್ಟ್ರೀಯ ತೀರುವೆ ಮನೆ ಮೂಲಕ ಶೀಘ್ರ ವಹಿವಾಟು ಮಾಡಲು ರಾಷ್ಟ್ರದ ನಾಲ್ಕು ಪ್ರಮುಖ ನಗರಗಳಿಗೆ ವಿಮಾನ ಮೂಲಕ ಚೆಕ್ಕುಗಳನ್ನು ಕಳಿಸುವ ಪರಿಪಾಟಿಯನ್ನು ಬ್ಯಾಂಕುಗಳು ಆರಂಭಿಸಿವೆ. ಗ್ರಾಹಕನಿಗಾಗಿ ವಿಶಿಷ್ಟ ಬಗೆಯ ಸವಾಲುಗಳನ್ನು ಸ್ವೀಕರಿಸಲೇಬೇಕಾದ ಅನಿವಾರ್ಯ ಇದೀಗ ಕಾಣಿಸಿಕೊಂಡಿದೆ.


**ಎಂ. ಎಸ್. ನರಸಿಂಹಮೂರ್ತಿ**

ವ್ಯವಸ್ಥಾಪಕ

ಮೈಸೂರು ಬ್ಯಾಂಕು

ಜಡಿಗೇನಹಳ್ಳಿ 562 154


## ಉದರಿ ಕಾರ್ಡ್

ಗ್ರಾಹಕನಿಗೆ ಅನುಕೂಲವಾಗಲೆಂದು ಬ್ಯಾಂಕುಗಳು ಇತ್ತೀಚೆಗೆ ಉದರಿ ಕಾರ್ಡ್ ಪದ್ಧತಿ ಪ್ರಾರಂಭಿಸಿದೆ. ಪ್ರವಾಸಿ ಚೆಕ್ಕುಗಳಿಗಿಂತಲೂ ಸುಲಭ ಎನ್ನಿಸುವ ಈ ಉದರಿ ಕಾರ್ಡ್ ಜನಪ್ರಿಯವಾಗತೊಡಗಿದೆ. ಪ್ರತಿಷ್ಠಿತ ವ್ಯಕ್ತಿಗಳಿಗೆ ನೀಡುವ ಈ ಕಾರ್ಡಿನಲ್ಲಿ ಧಾರಕನ ಹೆಸರು, ವಿಳಾಸ ಹಾಗೂ ಸಹಿ ಇರುತ್ತವೆ. ಪ್ರಮುಖ ಹೋಟೆಲ್‌ಗಳು, ವ್ಯಾಪಾರಿ ಸಂಸ್ಥೆಗಳು ಈ ಕಾರ್ಡನ್ನು ಆದರಿಸುತ್ತವೆ. ಪ್ರವಾಸದಲ್ಲಿದ್ದಾಗ ಹಣವನ್ನು ಒಯ್ಯುವ ಅಗತ್ಯವಿಲ್ಲ. ಚೆಕ್ ಪುಸ್ತಕಗಳ ರಗಳೆ ಮೊದಲೇ ಇಲ್ಲ. ಕೇವಲ ಗುರುತಿನ ಚೀಟಿಯಿಂದ ಗ್ರಾಹಕ ತನಗೆ ಬೇಕಾದ ಸೌಲಭ್ಯಗಳನ್ನು ಪಡೆಯಬಹುದಾದ ಈ ಪದ್ಧತಿ ಕೆಲವಾರು ಬ್ಯಾಂಕುಗಳಲ್ಲಿದೆ. ಉಳಿದ ಹಲವಾರು ಬ್ಯಾಂಕುಗಳು ಈ ಬಗ್ಗೆ ಯೋಚಿಸಿ ಕ್ರೆಡಿಟ್ ಕಾರ್ಡ್‌ಅನ್ನು ಜಾರಿಗೆ ತರಬೇಕಾಗಿದೆ.

'ಗ್ರಾಹಕ ಎಂದೂ ಸರಿ' ಎಂಬ ಸಾರಾಸಗಟು ಶಿಫಾರಸು ಪತ್ರವನ್ನು ಮಹಾತ್ಮ ಗಾಂಧಿಯಿಂದಲೇ ಪಡೆದಿರುವ ಗ್ರಾಹಕ ಬ್ಯಾಂಕನ್ನು ಅವಲಂಬಿಸಿಲ್ಲ; ಬ್ಯಾಂಕು ಗ್ರಾಹಕನನ್ನು ಅವಲಂಬಿಸಿದೆ, ಇದು ಎಲ್ಲ ಕಾಲಕ್ಕೂ ನಿಲ್ಲುವ ಸತ್ಯ. ಅಂದ ಮೇಲೆ ಗ್ರಾಹಕನ ಅಸಮಾಧಾನ, ತಪ್ಪುಗಳ ನಡುವೆಯೂ ಅನುಸರಿಸಿ ನಡೆದು ಸೌಹಾರ್ದ ವಾತಾವರಣ ಉಂಟುಮಾಡಬೇಕಾದರೆ ಬ್ಯಾಂಕಿನ ಅಧಿಕಾರಿ ಮತ್ತು ನೌಕರರಿಗೆ ತಾಳ್ಮೆ ಇರಬೇಕು, ಹೃದಯವಂತಿಕೆ ಇರಬೇಕು. ತಾವು ವ್ಯವಹರಿಸುತ್ತಿರುವುದು ಸೂಕ್ಷ್ಮ ಮನದ ತೀಕ್ಷ್ಣಮತಿಯ ಗ್ರಾಹಕನೊಡನೆ ಎಂಬ ಅರಿವು ಇರಬೇಕು. ಪ್ರತಿಯೊಬ್ಬ ಬ್ಯಾಂಕರನಿಗೂ ಮಾನವ ಶಾಸ್ತ್ರ, ಮನೋವಿಜ್ಞಾನದಲ್ಲಿ ತರಬೇತಿ ನೀಡಬೇಕಾದ ಅಗತ್ಯ ಈಗ ಹೆಚ್ಚಿದೆ.

ಗ್ರಾಹಕರ ಕುಂದುಕೊರತೆಗಳ ನಿವಾರಣಾ ಸಪ್ತಾಹ ಮಾಡಿದರೆ ಸಾಲದು. ತಾತ್ಕಾಲಿಕ ಪರಿಹಾರದಿಂದ, ತುಟಿ ಸೇವೆಯಿಂದ ಸಮಸ್ಯೆ ಬಗೆಹರಿಸುವ ಬದಲು ಶಾಶ್ವತ ಪರಿಹಾರ ಮಾರ್ಗಗಳನ್ನು ಯೋಚಿಸಬೇಕಾಗಿದೆ.

## ಜಾಹೀರಾತುಗಳು

ಗ್ರಾಹಕರನ್ನು ಆಕರ್ಷಿಸಲು ಜಾಹೀರಾತುಗಳನ್ನು

ಮಾಧ್ಯಮವನ್ನಾಗಿ ಬಳಸುತ್ತೇವೆ. ಎಲ್ಲ ವರ್ಗದ ಜನರಿಗೆ ಅಪ್ಯಾಯಮಾನವಾಗುವಂತಹ ಜಾಹೀರಾತುಗಳನ್ನು ನೀಡುವ ಅಗತ್ಯವೂ ಮುಖ್ಯ. ಕೆಲವೊಮ್ಮೆ ಜಾಹೀರಾತು ಓದಿ ರೊಚ್ಚಿಗೇಳುವ ಗ್ರಾಹಕರಿಗೂ ಕೊರತೆಯಿಲ್ಲ. 'ನಿಮ್ಮ ಮಗಳ ಮದುವೆಗೆ ಹತ್ತು ಸಾವಿರ ನಮ್ಮಲ್ಲಿ ಠೇವಣಿಯಾಗಿಟ್ಟು ಅರ್ಧ ಲಕ್ಷ ಹಿಂಪಡೆಯಿರಿ' ಎಂಬ ಜಾಹೀರಾತನ್ನು ಕೆಲವು ಮಹಿಳಾ ಸಂಘಗಳು ವಿರೋಧಿಸಿ, 'ಇದು ವರದಕ್ಷಿಣೆ ಪಿಡುಗನ್ನು ಪ್ರೋತ್ಸಾಹಿಸುತ್ತಿದೆ. ಅದ್ದೂರಿ ಮದುವೆಗಳಿಗೆ ಮಾನ್ಯತೆ ನೀಡುತ್ತಿದೆ' ಎಂದು ಆರೋಪಿಸಿದ್ದೂ ಉಂಟು.

'ನಿಮ್ಮ ಮಗ ವೈದ್ಯನಾಗಬೇಕೆ ? ನಮ್ಮ ಬ್ಯಾಂಕಿನಲ್ಲಿ ಆಕರ್ಷಕ ಆವರ್ತಕ ಠೇವಣಿ ಪ್ರಾರಂಭಿಸಿ' ಎಂಬ ಜಾಹೀರಾತು ನೋಡಿ ಕುಪಿತರಾದ ಗ್ರಾಹಕರು, 'ಮಗ ಮಾತ್ರ ಯಾಕೆ ? ಮಗಳು ಡಾಕ್ಟರ್ ಆಗಬಾರದೇ ? ಮಗ ಎಷ್ಟೇ ದೊಡ್ಡ ಡಾಕ್ಟರ್ ಆದರೂ ಅವನು ಲೇಡಿ ಡಾಕ್ಟರ್ ಆಗಲು ಸಾಧ್ಯವಿಲ್ಲ. ಮಗ-ಮಗಳೆಂಬ ತಾರತಮ್ಯ ತೆಗೆಯಿರಿ' ಎಂದು ಆಗ್ರಹಪಡಿಸಿ, ಇತ್ತೀಚೆಗೆ ಒಂದು ಬ್ಯಾಂಕು ತನ್ನ ಜಾಹೀರಾತು ಬದಲಿಸಿಕೊಳ್ಳುವಂತೆ ಮಾಡಿತು. 'ಮಗ'ನನ್ನು 'ಮಗು' ಮಾಡಿ 'ನಿಮ್ಮ ಮಗುವಿನ ಭವಿಷ್ಯಕ್ಕೆ' ಎಂಬ ತಿದ್ದುಪಡಿ ತಂದು ಲಿಂಗಾತೀತ ಜಾಹೀರಾತನ್ನು ಕೊಟ್ಟು ಗ್ರಾಹಕರನ್ನು ಸಮಾಧಾನಪಡಿಸಿದ್ದಾಯಿತು.

## ಮಾರಾಟ ತಂತ್ರ

ಪ್ರತಿಯೊಬ್ಬ ಬ್ಯಾಂಕರ್ ಮಾರುವುದು ಅದೇ ಬಡ್ಡಿಯ ಅದೇ ಠೇವಣಿಯನ್ನೇ ಆದರೂ ಯೋಜನೆಗೆ ಇಟ್ಟಿರುವ ಹೆಸರುಗಳು ಮಾತ್ರ ಬೇರೆ ಬೇರೆ. ಆಕರ್ಷಕ ಬಣ್ಣ, ವೈವಿಧ್ಯಮಯ ಕಾಗದದಲ್ಲಿ ಸುತ್ತಿ ಬಗೆಬಗೆಯ ಸಾಮಾನುಗಳನ್ನು ಒಂದೇ ತಯಾರಿಕಾ ಸಂಸ್ಥೆ ಮಾರಾಟ ಮಾಡುವಂತೆ ಬ್ಯಾಂಕರ್ ತನ್ನ ಯೋಜನೆಗಳನ್ನು ಜನತೆಗೆ ತಲುಪಿಸಬೇಕಿದೆ. ಪ್ರಮುಖ ವ್ಯಾಪಾರಿ ಸಂಸ್ಥೆಗಳಂತೆ ಬ್ಯಾಂಕುಗಳು ಸಹ ಹೊಸ ಬಗೆಯ ಜಾಹೀರಾತುಗಳನ್ನು ಜನಕ್ಕೆ ಮುಟ್ಟಿಸುವಲ್ಲಿ ಶಕ್ತಿಮೀರಿ ಪ್ರಯತ್ನಿಸುತ್ತಿವೆ. ಆದರೆ ಎಲ್ಲ ವರ್ಗದ ಜನಕ್ಕೆ ಅನ್ವಯಿಸುವ ರೀತಿಯಲ್ಲಿ ಜಾಹೀರಾತು ಇರುವಂತೆ ಎಚ್ಚರ ವಹಿಸಬೇಕಾದುದು ಮುಖ್ಯ.

ಗ್ರಾಹಕ ಸೇವೆಯನ್ನು ಮತ್ತಷ್ಟು ಉತ್ತಮಪಡಿಸಲು ವಿಜ್ಞಾನಯುಗ ನೆರವಾಗಿದೆ. ಗಣಕ ಮತ್ತು ಇತರ ಯಂತ್ರಗಳನ್ನು ಆದಷ್ಟು ಹೆಚ್ಚಿಗೆ ಬಳಸಿದಲ್ಲಿ ಗ್ರಾಹಕ ಸೇವೆಯನ್ನು ಉತ್ತಮಪಡಿಸಲು ಸಾಧ್ಯ. ಯಾಂತ್ರೀಕರಣದ ಅಗತ್ಯ ಇಂದು ಬ್ಯಾಂಕಿಂಗ್ ಕ್ಷೇತ್ರಕ್ಕೆ ಬೇಕಿದೆ. ಕೂಡಿ ಕಳೆಯುವ ಲೆಕ್ಕಗಳಲ್ಲಿ ತಲೆ ಕೆಡಿಸಿಕೊಂಡು, ಕೆಲಸದ ಒತ್ತಡ ಏರಿಸಿಕೊಂಡು, ಮತ್ತೊಬ್ಬ ಹೊಸ ಗ್ರಾಹಕ ಬಂದನೆಂದರೆ ಇವನನ್ನು ಸುಧಾರಿಸುವುದು ಹೇಗೆ ಎಂದು ಗಾಬರಿಯಾಗುವಲ್ಲಿ ಯಾವ ರೀತಿಯ ಸೇವೆ ಹೊಸ ಗ್ರಾಹಕನಿಗೆ ಸಿಗಲು ಸಾಧ್ಯ ?

ಷೇರು ಮತ್ತು ವಿದೇಶಿ ವಿನಿಮಯ ವಲಯದಲ್ಲಿ ವ್ಯವಹರಿಸುವಾಗ ನಮ್ಮ ಕಾರ್ಯವಿಧಾನ ಎಷ್ಟೇ ಕ್ಷಿಪ್ರವಾಗಿದ್ದರೂ ಸಾಲದೆಂಬಂತಾಗಿದೆ. ಉಪಗ್ರಹ ವಹಿವಾಟು, ದೂರದರ್ಶನ ಸೌಲಭ್ಯ ಬಳಸಿಕೊಂಡು ಕ್ಷಣಕ್ಷಣಕ್ಕೂ ಬದಲಾಗುವ ವಿಶ್ವ ಮಾರುಕಟ್ಟೆಯ ಆರ್ಥಿಕ ಸ್ಥಿತಿಗತಿಗಳ ಸ್ಪಷ್ಟ ಅರಿವು ಬ್ಯಾಂಕರನಿಗೆ ಇದ್ದಲ್ಲಿ ಅದರ ಪ್ರಯೋಜನ ಗ್ರಾಹಕನಿಗಷ್ಟೇ ಅಲ್ಲ, ಬ್ಯಾಂಕರನಿಗೂ ದೊರೆಯಲಸಾಧ್ಯ. ಯಾವಬ್ಯಾಂಕಿನಲ್ಲಿ ಈ ಆಧುನಿಕಸೌಲಭ್ಯಗಳಿವೆಯೋ ಅತ್ತಕಡೆ ಗ್ರಾಹಕ ಸರಿಯುವುದು ಸಾಮಾನ್ಯ.

## ವಿವಿಧ ಯೋಜನೆಗಳು

ಪ್ರಸ್ತುತ ಸಾಮಾಜಿಕ ಅಗತ್ಯಗಳನ್ನು ಗುರುತಿಸಿ ಅವುಗಳನ್ನು ಪೂರೈಸುವ ದಿಶೆಯಲ್ಲಿ ಬ್ಯಾಂಕುಗಳು ನಡೆಸಿರುವ ಪ್ರಯತ್ನವಾದ ನವೋನ್ಮೇಷ ಬ್ಯಾಂಕಿಂಗ್‌ನಿಂದ ಗ್ರಾಹಕನನ್ನು ಆಕರ್ಷಿಸಲು ಸಾಧ್ಯ. ಯಾವ ಸಮಾಜಕ್ಕೆ ಬ್ಯಾಂಕು ಹೆಚ್ಚು ಹತ್ತಿರವಾಗಿರುವುದೋ ಆ ಸಮಾಜದಲ್ಲಿನ ಗ್ರಾಹಕರು ಬ್ಯಾಂಕನ್ನು ಗೌರವಿಸುವುದು ಸಹಜವೇ ಸರಿ. ದತ್ತು ಸ್ವೀಕರಿಸಿದ ಗ್ರಾಮಗಳ ಅಭಿವೃದ್ಧಿಗೆ ಪ್ರಯತ್ನಿಸುವ, ಅಂಗವಿಕಲರ, ಮಹಿಳೆಯರ, ಹಿಂದುಳಿದವರ ಕಲ್ಯಾಣಕ್ಕಾಗಿ ಶ್ರಮಿಸುವ ಯೋಜನೆಗಳನ್ನು ಹಮ್ಮಿಕೊಂಡಿರುವ ಬ್ಯಾಂಕು ಹೆಚ್ಚು ರಚನಾತ್ಮಕ ಕಾರ್ಯಗಳನ್ನು ಮಾಡಬೇಕಿದೆ.

ಬ್ಯಾಂಕಿಂಗ್ ಪ್ರಪಂಚ ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಸೌಲಭ್ಯ ಬಯಸಿ ಬರುವ ಗ್ರಾಹಕರ ಸಂಖ್ಯೆ ದಿನದಿನಕ್ಕೂ ಹೆಚ್ಚುತ್ತಿರುವುದೇ ಇದಕ್ಕೆ ಕಾರಣ. ಕೆಲವು ವರ್ಷಗಳ ಮೊದಲಿದ್ದಂತೆ ಬ್ಯಾಂಕರ್ ತನ್ನ ಯೋಜನೆಯ ರೀತಿ ತನ್ನ ಪಾಡಿಗೆ ತಾನು ಕೆಲಸ ಮಾಡಿಕೊಂಡಿರಲು ಈಗ ಅವಕಾಶವಿಲ್ಲ. ಸರ್ಕಾರದ ಆದೇಶಾನುಸಾರ ಕಾದಿರಿಸಿದ ಕ್ಷೇತ್ರಗಳ ಅಭಿವೃದ್ಧಿಗಾಗಿ ಶ್ರಮಿಸಬೇಕಾದ ಗುರುತರ ಹೊಣೆಗಾರಿಕೆ ಇದೆ. ಅವನ ಮೇಲೆ ಸರ್ಕಾರದ ಒತ್ತಡವಿದೆ, ಸಮಾಜದ ಒತ್ತಡವಿದೆ, ರಾಜಕೀಯ ಒತ್ತಡವಿದೆ. ಕುರಿ, ಕೋಳಿ, ಎಮ್ಮೆಗಳಿಗೆ ಇಷ್ಟವಿಲ್ಲದ ಸಂದರ್ಭದಲ್ಲೂ ಸಾಲ ನೀಡಿ ವಸೂಲಾತಿಗೆ ಪರದಾಡುವ ಪರಿಸ್ಥಿತಿ ಇಲ್ಲವೆನ್ನಲಾಗದು. ಗ್ರಾಹಕರಿಗಾಗಿ ಈ ಸಾಲ ಸೌಲಭ್ಯಗಳನ್ನು ನೀಡಲೇಬೇಕಾದಾಗ, ಸವಾಲನ್ನು ಸ್ವೀಕರಿಸಿ ಸಾಲ ಕೊಡಬೇಕು. ಕೊಟ್ಟಿದ್ದು ಮರುಪಾವತಿಯಾಗುವಂತೆ ನೋಡಿಕೊಳ್ಳಬೇಕು. ಸಂಸ್ಥೆಯ ಬೆಲೆ ಹಾಗೂ ತನ್ನ ತಲೆಯನ್ನು ಒಟ್ಟಿಗೆ ಉಳಿಸಿಕೊಳ್ಳಬೇಕು. ಈ ಬಲವಂತ ಮಾಘ ಸವಾಲುಗಳನ್ನು ಸ್ವೀಕರಿಸದೆ ಹೋದಲ್ಲಿ ಗ್ರಾಹಕರ ಆಗ್ರಹಕ್ಕೆ ತುತ್ತಾಗಬೇಕಾದ ಸಂದರ್ಭಗಳೇ ಹೆಚ್ಚು.

## ಗ್ರಾಹಕ ಸೇವಾ ಸಮಿತಿಗಳು

ಬ್ಯಾಂಕರನ-ಗ್ರಾಹಕನ ಸಂಬಂಧ ಸೌಹಾರ್ದಯುತವಾಗಿರಲು ಯಾವ ಸುಧಾರಣೆಗಳು ಆಗಬೇಕು ಎಂಬುದನ್ನು ವಿವೇಚಿಸಿ ಅನೇಕ ಸಮಿತಿಗಳು ತಮ್ಮ ಅಭಿಪ್ರಾಯಗಳನ್ನು ಮುಂದಿಟ್ಟಿವೆ. ಆರ್. ಕೆ. ತಲವಾರ್ ಸಮಿತಿ ಸೂಚನೆಗಳ ರೀತಿ ಪ್ರತಿ ಬ್ಯಾಂಕೂ ಒಂದು ಗ್ರಾಹಕ ಸೇವಾ ಸಮಿತಿ ರಚಿಸಬೇಕು. ವ್ಯವಸ್ಥಾಪಕ, ಎಲ್ಲ ವರ್ಗದ ನೌಕರ ಪ್ರತಿನಿಧಿಗಳು ಇರುವ ಈ ಸಮಿತಿ ತಿಂಗಳಿಗೊಮ್ಮೆ ಸಭೆ ಸೇರಿ ಗ್ರಾಹಕ ಸೇವೆಯಲ್ಲಿರಬಹುದಾದ ವಿಳಂಬ, ಅಡಚಣೆಗಳ ಬಗ್ಗೆ ಕೂಲಂಕಷ ಅಧ್ಯಯನ ನಡೆಸಿ ಲೋಪಗಳನ್ನು ಸರಿಪಡಿಸಬೇಕು. ಗ್ರಾಹಕನ ಬೇಡಿಕೆ ಬಯಕೆಗಳು ಬೇರೆಬೇರೆ ಕಾಲ ಸ್ಥಳಗಳಲ್ಲಿ ಬೇರೆಬೇರೆಯದ್ದಾಗಿರುತ್ತದೆ. ಹಳ್ಳಿಯವರು, ಪಟ್ಟಣದವರು, ವ್ಯಾಪಾರಸ್ಥರು, ವ್ಯವಸಾಯಿಗಳು, ಉದ್ಯಮಿಗಳು—ಹೀಗೆ ಹಲವು ಹತ್ತುವರ್ಗದ ಜನ ಬ್ಯಾಂಕಿಂದ ಪಡೆಯಬೇಕಾದ ಸೌಲಭ್ಯಗಳನ್ನು ತಮ್ಮದೇ ಆದ ರೀತಿಯಲ್ಲಿ ರೂಪಿಸಿಕೊಂಡಿರುತ್ತಾರೆ.

ಇವರ ಇಷ್ಟಕಾಮ್ಯಗಳನ್ನು ಸಿದ್ಧಿಸಿ ಕೊಡುವಲ್ಲಿ ಹಲವಾರು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮುನ್ನಡೆಯಬೇಕಾಗುತ್ತದೆ : (1) ಗ್ರಾಹಕರ ಬೇಡಿಕೆಗಳು ಹಾಗೂ ಅವರ ನಿರೀಕ್ಷೆಗಳ ವೈಖರಿ ; (2) ಬ್ಯಾಂಕರನಿಗೆ ಇರುವ ವೃತ್ತಿ ನಿಪುಣತೆ ; (3) ಬ್ಯಾಂಕಿನ ನೌಕರರನ್ನು ಈ ದಿಶೆಯಲ್ಲಿ ಕಾರ್ಯಪ್ರವೃತ್ತರನ್ನಾಗಿಸುವುದು ; (4) ಬ್ಯಾಂಕಿನ ನಿಯಮ ಕಟ್ಟಳೆಗಳ ಒಳಗೆ ನಡೆಯುವುದು.

ಪ್ರತಿಯೊಬ್ಬ ಗ್ರಾಹಕನ ವೈಯಕ್ತಿಕ ಅಭಿಲಾಷೆ ಪೂರೈಸುವಲ್ಲಿ ಬ್ಯಾಂಕಿನ ನಿಯಮಾವಳಿಗಳು ಕೆಲವೊಮ್ಮೆ ಅವಕಾಶ ಕೊಡಲು ಸಾಧ್ಯವಿಲ್ಲ. ಆದರೆ ಗ್ರಾಹಕ ಸಮುದಾಯಕ್ಕೆ ಹಿತವಾಗಬಲ್ಲ ರೀತಿಯಲ್ಲಿ ಗ್ರಾಹಕ ಸೇವೆಯನ್ನು ಉತ್ತಮಪಡಿಸುವತ್ತ ದಿಟ್ಟ ಹೆಜ್ಜೆ ಇದೀಗ ಇಡಬೇಕಿದೆ. ಗ್ರಾಹಕರ ಅಗತ್ಯಗಳನ್ನು ಗುರುತಿಸಿ ಕ್ಷಿಪ್ರಗತಿಯಲ್ಲಿ ಅದನ್ನು ಈಡೇರಿಸಬೇಕಾದ ಹೊಣೆಗಾರಿಕೆ ಬ್ಯಾಂಕುಗಳ ಮೇಲಿದೆ. ಪ್ರತಿಯೊಬ್ಬ ನೌಕರನಲ್ಲಿ ಸೇವಾ ಮನೋಭಾವ ಅರಳಿಸುವಲ್ಲಿ, ಯಾಂತ್ರೀಕರಿಸಿ ಕಾರ್ಯಗಳನ್ನು ಸುಲಭವಾಗಿಸುವಲ್ಲಿ, ಬ್ಯಾಂಕೇತರ ಚಟುವಟಿಕೆಗಳಿಂದ ಸಮಾಜಕ್ಕೆ ಹತ್ತಿರವಾಗುವಲ್ಲಿ, ವಿದೇಶಿ ವಿನಿಮಯ, ಷೇರುಗಳು ಮೊದಲಾದ ವಹಿವಾಟಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ವಿವರ ನೀಡುವಲ್ಲಿ ಬ್ಯಾಂಕು ಇನ್ನಷ್ಟು ಮತ್ತಷ್ಟು ಬೆಳೆಯಬೇಕಿದೆ.

ಇಷ್ಟಾಗಿಯೂ ಗ್ರಾಹಕ ಸೇವೆಯನ್ನು ಪರಿಪೂರ್ಣವಾಗಿ, ತೃಪ್ತಿಕರವಾಗಿ ನೀಡಬಲ್ಲ ಸ್ಥಿತಿ ತಲುಪುವುದು ಕಷ್ಟವೇ ಸರಿ. ಆದರೆ ಗ್ರಾಹಕ ಸೇವೆಯನ್ನು ಉತ್ತಮಪಡಿಸುತ್ತ ಹೋಗುವ ನಿರಂತರ ಕ್ರಮದಿಂದ ಬ್ಯಾಂಕು ಹಾಗೂ ಗ್ರಾಹಕರ ಸಂಬಂಧ ಮತ್ತಷ್ಟು ಬೆಸೆದುಕೊಂಡು, ಸ್ವಲ್ಪ ಹೆಚ್ಚಿನ ಬಡ್ಡಿ ನೀಡುವ ಬ್ಯಾಂಕೇತರ ಹಣಕಾಸು ಸಂಸ್ಥೆಯಲ್ಲಿ ಹಣ ತೊಡಗಿಸಬೇಕೆಂದಿರುವ ವ್ಯಕ್ತಿಯೂ ಬ್ಯಾಂಕಿನತ್ತ ಆಕರ್ಷಿತನಾಗುವಂತೆ ಮಾಡಲು ಸಾಧ್ಯವಿದೆ. ಆ ದಿನ ಹತ್ತಿರವಾದಲ್ಲಿ ಮಾತ್ರ ಬ್ಯಾಂಕು ತನ್ನ ಈವರೆಗಿನ ಕ್ಷಿಪ್ರ ಬೆಳವಣಿಗೆಯನ್ನು ಮುಂದೂ ಸಹ ಉಳಿಸಿಕೊಳ್ಳಬಹುದಷ್ಟೆ.

R. N. 36702/83

# ಅಂದ ಚಂದದ ಸುಂದರ
# ಮನೆ-ಮನಗಳಿಗೆ
# 'ಹ್ಯಾಪ್ಪಿಹೋಂ'ನ ಪರಿಮಳ



ಭವ್ಯ ಪರಂಪರೆಯ
ಮೂರು ವೈಭವಯುತ
ಪರಿಮಳಗಳ ಅಪೂರ್ವ ಮಿಲನ
'ಹ್ಯಾಪ್ಪಿಹೋಂ'

ವಿಶ್ವ ಪ್ರಸಿದ್ಧ
'ಸುಗಂಧ ಶೃಂಗಾರ್' ತಯಾರಕರಿಂದ




**ಅರವಿಂದ**
**ಪರಿಮಳ ವರ್ಕ್ಸ್**
ಮೈಸೂರು - 570 004 (ಭಾರತ)

PRINTED BY G. H. KRISHNAMURTHY, MYSORE PRINTING AND PUBLISHING HOUSE, MYSORE-1